


# ಒರಿಗಾಮಿ ಮೂಲಕ ಗಣಿತ

ವಿ. ಎಸ್. ಎಸ್. ಶಾಸ್ತ್ರಿ



ನವಕರ್ನಾಟಕ ಪ್ರಕಾಶನ

**ORIGAAMI MOOLAKA GANITA** (Kannada)
*MATHEMATICS THROUGH ORIGAMI by V. S. S. Sastry, Kolar*
*in the series 'Ganita Samvatsara 2012' (National Year of Mathematics - 2012)*

Third Print : 2018 Pages : 100 Price : ₹ 150
Paper : 80 gsm Maplitho 15.5 Kgs (¼ Crown Size)

ಮೊದಲನೇ ಮುದ್ರಣ : 2014
ಎರಡನೇ ಮುದ್ರಣ : 2017
ಮೂರನೇ ಮುದ್ರಣ : 2018

ಪ್ರತಿಗಳ ಸಂಖ್ಯೆ : 1000



**ಬೆಲೆ : ₹ 150**

ಮುಖಪುಟ : ಎಂ. ಎಸ್. ಶ್ರೀಕಂಠಮೂರ್ತಿ
ಒಳಚಿತ್ರಗಳು : ವಿವಿಧ ಮೂಲಗಳಿಂದ

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – 560 001
ದೂರವಾಣಿ : 080–22161900 / 22161901 / 22161902

*ಶಾಖೆಗಳು/ಮಳಿಗೆಗಳು*
ನವಕರ್ನಾಟಕ, ಕ್ರೆಸೆಂಟ್ ರಸ್ತೆ, ಬೆಂಗಳೂರು – 560 001, ದೂರವಾಣಿ : 080–22161913/14, Email : nkpsales@gmail.com
ನವಕರ್ನಾಟಕ, ಕೆಂಪೇಗೌಡ ರಸ್ತೆ, ಬೆಂಗಳೂರು – 560 009, ದೂರವಾಣಿ : 080–22203106, Email : nkpkgr@gmail.com
ನವಕರ್ನಾಟಕ, ಗಾಂಧಿನಗರ, ಬೆಂಗಳೂರು – 560 009, ದೂರವಾಣಿ : 080–22251382, Email : nkpgnr@gmail.com
ನವಕರ್ನಾಟಕ, ಕೆ.ಎಸ್.ರಾವ್ ರಸ್ತೆ, ಮಂಗಳೂರು – 575 001, ದೂರವಾಣಿ : 0824–2441016, Email : nkpmng@gmail.com
ನವಕರ್ನಾಟಕ, ಬಲ್ಮಠ, ಮಂಗಳೂರು – 575 001, ದೂರವಾಣಿ : 0824–2425161, Email : nkpbalmatta@gmail.com
ನವಕರ್ನಾಟಕ, ರಾಮಸ್ವಾಮಿ ವೃತ್ತ, ಮೈಸೂರು – 570 024, ದೂರವಾಣಿ : 0821–2424094, Email : nkpmysuru@gmail.com
ನವಕರ್ನಾಟಕ, ಸ್ಟೇಷನ್ ರಸ್ತೆ, ಕಲಬುರಗಿ – 585 102, ದೂರವಾಣಿ : 08472–224302, Email : nkpglb@gmail.com

ಮುದ್ರಕರು : ಶೋಭಾ ಪ್ರಿಂಟರ್ಸ್, ಬೆಂಗಳೂರು – 560 021

**0308185169** **ISBN 978-81-8467-437-8**

Published by Navakarnataka Publications Private Limited, Embassy Centre Crescent Road, Bengaluru - 560 001 (INDIA). Email : Navakarnataka@gmail.com

# ಗಣಿತ ಸಂವತ್ಸರ ೨೦೧೨

## ಸಂಪಾದಕರ ನುಡಿ

ವಿಶ್ವವಿಖ್ಯಾತ ಗಣಿತ ಪ್ರತಿಭೆ ಶ್ರೀನಿವಾಸ ರಾಮಾನುಜನ್‌ರ 125ನೇ ಜನ್ಮವರ್ಷವಾದ 2012ನೇ ಇಸವಿಯನ್ನು ಭಾರತ ಸರ್ಕಾರವು 'ರಾಷ್ಟ್ರೀಯ ಗಣಿತ ವರ್ಷ' ಎಂದು ಘೋಷಿಸಿರುವುದು ಸ್ತುತ್ಯರ್ಹ.

ಈ ಪರ್ವ ಸಂದರ್ಭದಲ್ಲಿ ನಮ್ಮ ರಾಜ್ಯದಾದ್ಯಂತ ವಿದ್ಯಾರ್ಥಿಗಳಿಗಾಗಿ, ಅಧ್ಯಾಪಕರಿಗಾಗಿ ಹಾಗೂ ಗಣಿತಾಭಿಮಾನಿ ಸಾರ್ವಜನಿಕರಿಗಾಗಿ ಗಣಿತದ ವಿವಿಧ ಪ್ರಕಾರಗಳಲ್ಲಿ ಮಹತ್ವದ ಮತ್ತು ಸ್ವಾರಸ್ಯಮಯ ವಿಷಯಗಳ ಬಗ್ಗೆ ಹಾಗೂ ಪ್ರಸಿದ್ಧ ಗಣಿತಜ್ಞರ ಬಗ್ಗೆ ಕೆಲವು ಕೃತಿಗಳನ್ನು ಹೊರತರಬೇಕೆಂದು ನಿರ್ಧರಿಸಿ ನವಕರ್ನಾಟಕ ಪ್ರಕಾಶನ ಸಂಸ್ಥೆಯು ಯೋಜನೆಯೊಂದನ್ನು ಸಿದ್ಧಪಡಿಸುವಂತೆ ಈ ಸಂಪಾದಕ ಮಂಡಲಿಗೆ ತಿಳಿಸಿತು. ಅದರಂತೆ ಮಂಡಲಿಯು ತಜ್ಞ ಲೇಖಕರನ್ನು ಗುರುತಿಸಿ ಕನ್ನಡದಲ್ಲಿ ಕೆಲವು ಉಪಯುಕ್ತ ಪುಸ್ತಕಗಳನ್ನು ರಚಿಸುವಂತೆಯೂ ಇನ್ನು ಕೆಲವನ್ನು ಆಂಗ್ಲಭಾಷೆಯಿಂದ ಅನುವಾದಿಸು ವಂತೆಯೂ ಏರ್ಪಾಡು ಮಾಡಿತು. ಈ ಪ್ರಯತ್ನದ ಫಲವಾಗಿ **ವಿಶ್ವದ ಪ್ರಸಿದ್ಧ ಮಹಿಳಾ ಗಣಿತಜ್ಞರು, ಮಾಯಾಚೌಕಗಳ ಸ್ವಾರಸ್ಯ , ಭಾರತದಲ್ಲಿ ಸಂಖ್ಯಾ ಪದ್ಧತಿ ಮತ್ತು ರೇಖಾಗಣಿತ, ಕ್ಯಾಲೆಂಡರ್‌ನೊಂದಿಗೆ ಸಂಖ್ಯಾವಿನೋದ, ಸಂಖ್ಯಾಲೋಕದಲ್ಲಿ ಅಲೆದಾಟ, ಏನು ? ಗಣಿತ ಅಂದ್ರಾ ?, ಮನರಂಜನೆಗಾಗಿ ಬೀಜಗಣಿತ, ನೀವೇ ಮಾಡಿ : ಪ್ಲೇಟೋನ ಘನಾಕಾರಗಳು, ಒರಿಗಾಮಿ ಮೂಲಕ ಗಣಿತ** ಮುಂತಾದ ಹೊತ್ತಿಗೆಗಳು ಈಗ ಪ್ರಕಟವಾಗುತ್ತಿವೆ. ಹಾಗೆಯೇ, ಖ್ಯಾತ ಗಣಿತ ಮತ್ತು ವಿಜ್ಞಾನ ಲೇಖಕರಾಗಿದ್ದ ಜಿ. ಟಿ. ನಾರಾಯಣರಾಯರ **ಶ್ರೀನಿವಾಸ ರಾಮಾನುಜನ್ : ಜೀವನ ಮತ್ತು ಸಾಧನೆ** ಎಂಬ ಕೃತಿಯನ್ನು ಈ ಸಂದರ್ಭದಲ್ಲಿ ಪ್ರಕಟಿಸಲು ಸಂತೋಷವಾಗುತ್ತದೆ. ನಮ್ಮ ಕನ್ನಡ ನಾಡಿನ ಓದುಗರಲ್ಲಿ ಗಣಿತವಿಜ್ಞಾನದಲ್ಲಿ ವಿಶೇಷವಾದ ಆಸಕ್ತಿ, ಕುತೂಹಲ ಮತ್ತು ಸ್ಫೂರ್ತಿ ಉಂಟುಮಾಡುವ ಈ ಕೈಂಕರ್ಯದಲ್ಲಿ ಬಹಳ ಶ್ರದ್ಧೆಯಿಂದ ಭಾಗವಹಿಸಿರುವ ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಸಂಸ್ಥೆಯವರಿಗೆ ನಮ್ಮ ಸಂಪಾದಕ ಮಂಡಲಿಯ ಅಭಿನಂದನೆಗಳು.

**ಸಂಪಾದಕ ಮಂಡಲಿ**

## ಪ್ರಕಾಶಕರ ನುಡಿ

ಕನ್ನಡದಲ್ಲಿ ಇಂದು ವಿಜ್ಞಾನ ಸಾಹಿತ್ಯ ಸ್ವಲ್ಪಮಟ್ಟಿಗೆ ಲಭ್ಯವಿದೆಯಾದರೂ ಗಣಿತ ಶಾಸ್ತ್ರದ ಕುರಿತ ಕೃತಿಗಳು ತೀರಾ ವಿರಳವೆಂದೇ ಹೇಳಬಹುದು. ಇಂತಹ ಸಂದರ್ಭದಲ್ಲಿ 2012ನೇ ಇಸವಿಯನ್ನು ಭಾರತ ಸರ್ಕಾರ 'ರಾಷ್ಟ್ರೀಯ ಗಣಿತ ವರ್ಷ' ಎಂದು ಘೋಷಿಸಿರುವುದು ಕನ್ನಡದಲ್ಲಿ ಗಣಿತ ಪುಸ್ತಕಗಳ ಕೊರತೆಯ ಬಗ್ಗೆ ನಮ್ಮನ್ನು ಎಚ್ಚರಿಸಿ ಕಾರ್ಯೋನ್ಮುಖರಾಗುವಂತೆ ಪ್ರೇರೇಪಿಸಿದೆ.

ಈ ಕುರಿತು ಗಣಿತ ಮತ್ತು ಖಗೋಳ ವಿಜ್ಞಾನ ಕೃತಿಗಳ ಲೇಖಕರಾಗಿ ಖ್ಯಾತರಾಗಿರುವ ಡಾ॥ ಎಸ್. ಬಾಲಚಂದ್ರ ರಾವ್ ಅವರೊಡನೆ ಚರ್ಚಿಸಿ, ನಾಲ್ಕು ಸದಸ್ಯರ ಸಂಪಾದಕ ಮಂಡಲಿಯನ್ನು ರಚಿಸಿ, ಪ್ರಕಟಣೆಗಳ ರೂಪುರೇಷೆಗಳನ್ನು ಹಾಕಿಕೊಂಡು 'ಗಣಿತ ಸಂವತ್ಸರ – ೨೦೧೨' ಮಾಲೆಯಡಿ ಕೆಲವು ಉಪಯುಕ್ತ ಕೃತಿಗಳನ್ನು ಹೊರತರುವುದಾಗಿ ನಿರ್ಧರಿಸಲಾಯಿತು.

ಮಾಲೆಯ ಮೊದಲ ಪುಸ್ತಕವು ಶ್ರೀನಿವಾಸ ರಾಮಾನುಜನ್ ಅವರ ಜೀವನ – ಸಾಧನೆಗಳನ್ನು ಪರಿಚಯಿಸುತ್ತದೆ. ವಿಶ್ವದ ಖ್ಯಾತ ಗಣಿತಜ್ಞೆಯರ ಕುರಿತಾದ ಪುಸ್ತಕವು ಈ ಮಾಲೆಯಲ್ಲಿದೆ. ಇನ್ನುಳಿದವು ಗಣಿತದ ವಿವಿಧ ಆಯಾಮಗಳನ್ನು ತಿಳಿಸಿಕೊಡುತ್ತ ಜ್ಞಾನದ ಜೊತೆಗೆ ಮನೋಲ್ಲಾಸ ನೀಡುವಂಥವು. ಗಣಿತದ ಮೋಡಿಗಾರರೆಂದು ವಿಖ್ಯಾತರಾಗಿದ್ದ ರಷ್ಯದ ಯಾಕೊವ್ ಪೆರೆಲ್ಮನ್ ಹಾಗೂ ಪ್ರಸಿದ್ಧ ಗಣಿತ ಸಂವಹನಕಾರರಾಗಿದ್ದ ಚೆನ್ನೈಯಲ್ಲಿನ ಪಿ. ಕೆ. ಶ್ರೀನಿವಾಸನ್ ಅವರ ಪುಸ್ತಕಗಳ ಅನುವಾದಗಳೂ ಇದರಲ್ಲಿ ಸೇರಿವೆ.

ಯಾವತ್ತೂ ವಿಜ್ಞಾನದ ಪುಸ್ತಕಗಳನ್ನು ಪ್ರಕಟಿಸುವಲ್ಲಿ ಮುಂಚೂಣಿಯಲ್ಲಿರುವ ನಮ್ಮ ಪ್ರಕಾಶನದ ಈ ಪುಸ್ತಕಗಳನ್ನು ಓದುಗರು ಪ್ರೋತ್ಸಾಹಿಸುವರೆಂಬ ನಂಬಿಕೆ ನಮಗಿದೆ. ಕೃತಿಗಳನ್ನು ಓದಿ, ಒಪ್ಪ ಓರಣಗೊಳಿಸಿದ ಸಂಪಾದಕ ಮಂಡಳಿಯ ಸದಸ್ಯರಿಗೂ, ಕೃತಿ ರಚನೆ ಮಾಡಿದ ಲೇಖಕರಿಗೂ ಹಾಗೂ ಮೂಲ ಕೃತಿಗಳಿಂದ ಕನ್ನಡಕ್ಕೆ ತಂದ ಅನುವಾದಕರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಮುಖಪುಟ ಹಾಗೂ ಒಳಚಿತ್ರಗಳನ್ನು ರಚಿಸಿದ ಕಲಾವಿದರಿಗೂ, ಸಹಕರಿಸಿದ ಎಲ್ಲರಿಗೂ ವಂದನೆಗಳು.

**ಆರ್. ಎಸ್. ರಾಜಾರಾಮ್**
ನವಕರ್ನಾಟಕ ಪ್ರಕಾಶನ

# ಪರಿವಿಡಿ

# 1. ಒರಿಗಾಮಿ ಆಟವೋ – ಗಣಿತವೋ ?

ತಂದನಂ ಸುಂದರರಾಯರು, ಚೆನ್ನೈನ ರಾಯಪೆಟ್ಟ ಹೈಸ್ಕೂಲ್‌ನಲ್ಲಿ ಹೆಡ್‌ಮಾಸ್ಟರ್ ಆಗಿದ್ದರು. ಅವರು ನಿವೃತ್ತರಾದ ಮೇಲೆ ಒಂದು ದಿನ ಮೊಮ್ಮಗನ ಹುಟ್ಟಿದ ಹಬ್ಬಕ್ಕೆ ಉಡುಗೊರೆ ನೀಡಲು, ಚೆನ್ನೈನ ಸ್ಪೆನ್ಸರ್ ಅಂಗಡಿಗೆ ಹೊರಟರು. ಅಲ್ಲೊಂದು ಬಣ್ಣದ ಪುಸ್ತಕ ಅವರನ್ನು ಆಕರ್ಷಿಸಿತು. ಅದನ್ನು ಕೊಂಡು ತಂದ ಅವರು ಮೊಮ್ಮಗನಿಗೆ ಉಡುಗೊರೆಯಾಗಿತ್ತರು. ಆ ಮೊಮ್ಮಗ ತಾತ ತಂದ ಈ ಪ್ಯಾಕೆಟ್ ಅನ್ನು ಕಣ್ತೆರೆದೂ ಸಹ ನೋಡಲಿಲ್ಲ. ಕೊನೆಗೆ ಸುಂದರರಾಯರು ಆ ಪುಸ್ತಕ ತೆಗೆದರು. ಅಲ್ಲಿ ಬಣ್ಣದ ಹಾಳೆಗಳ ಕಟ್ಟನ್ನು ಸಿಕ್ಕಿಸಿದ್ದರು. ಪುಸ್ತಕದಲ್ಲಿದ್ದ ರೇಖಾ ಚಿತ್ರಗಳನ್ನು ನೋಡಿ ಕಾಗದ ಮಡಿಸಿದಾಗ ವಿವಿಧ ರೀತಿಯ ಪ್ರಾಣಿ ಪಕ್ಷಿಗಳ ಮಾದರಿಗಳು ಕೈಯಲ್ಲಿ ಕುಳಿತವು. ಆಶ್ಚರ್ಯಚಕಿತರಾದ ಈ ರಿಟೈರ್ಡ್ ಹೆಡ್ ಮಾಸ್ಟರ್‌ರವರು ತಾವು ಮಾಡಿದ ಮಾದರಿಗಳನ್ನು ಬಿಡಿಸಿದಾಗ, ಅಲ್ಲಿನ ವಿವಿಧ ರೇಖಾ ಖಂಡಗಳು ರೇಖಾ ಗಣಿತದ ರೇಖೆಗಳಾಗಿ ಕಂಡವು. ಕುತೂಹಲದಿಂದ ಸುಂದರರಾಯರು ಕಾಗದ ಮಡಿಸಿದಾಗ ಮೂಡುವ ರೇಖೆಗಳಲ್ಲಿ ತಾವು ಪಾಠಮಾಡಿದ ರೇಖಾಗಣಿತದ ಅಂಶಗಳನ್ನು ಹುಡುಕತೊಡಗಿದರು. ಈ ಕಾರ್ಯವು ಅಂದಿಗೆ ಯಾರೂ ಗಮನಿಸದ ಪ್ರಪಂಚಕ್ಕೆ ಅವರನ್ನು ಕೊಂಡೊಯ್ದಿತು.

T. SUNDARA ROW'S

Geometric Exercises in

Paper Folding

Edited and Revised by

WOOSTER WOODRUFF BEMAN

PROFESSOR OF MATHEMATICS IN THE UNIVERSITY OF MICHIGAN

and

DAVID EUGENE SMITH

PROFESSOR OF MATHEMATICS IN TEACHERS' COLLEGE OF COLUMBIA UNIVERSITY

WITH 87 ILLUSTRATIONS

FOURTH EDITION

THE OPEN COURT PUBLISHING COMPANY

LA SALLE, ILLINOIS ::: LONDON

1958

ಟಿ. ಸುಂದರರಾಯರು ತಮ್ಮ ಅಧ್ಯಯನವನ್ನು ಮುಂದುವರೆಸಿ 1893ರಲ್ಲಿ Geometric Exercises in paper folding – (ಕಾಗದ ಮಡಿಕೆಯಲ್ಲಿ ಜ್ಯಾಮಿತೀಯ ರಚನೆಗಳು) ಎಂಬ ಶೀರ್ಷಿಕೆಯಡಿ ಪುಸ್ತಕವೊಂದನ್ನು ಬರೆದರು. ಅಂದಿನ ಕಾಲದಲ್ಲಿ ಗಣಿತ ಶಾಸ್ತ್ರದ ಮುಂಚೂಣಿಯಲ್ಲಿದ್ದ ಜರ್ಮನ್ ಗಣಿತಜ್ಞರ ಕಣ್ಣಿಗೆ ಈ ಪುಸ್ತಕ ಬಿದ್ದು, ಅದು ಜರ್ಮನ್ ಭಾಷೆಗೆ ತರ್ಜುಮೆಗೊಂಡಿತು. ಅಲ್ಲಿ ಅದು 47 ಬಾರಿ ಪುನರ್‌ಮುದ್ರಣಗೊಂಡಿತು. American Mathematical Association ರವರು ಈ ಜರ್ಮನ್ ಆವೃತ್ತಿಯನ್ನು ಪರಿಷ್ಕರಿಸಿ ನಲವತ್ತೇಳು ಬಾರಿ ತಾವೂ ಮುದ್ರಿಸಿದರು. ಸುಂದರರಾವ್ ಅವರು 1853ರಲ್ಲಿ ಹುಟ್ಟಿದರು ಎಂಬ ವಿಷಯದ ಹೊರತು ಬೇರೆ ಯಾವ ವೈಯಕ್ತಿಕ ವಿವರಗಳೂ ಲಭ್ಯವಿಲ್ಲ.

ಈಗ ಇದೇ ಆವೃತ್ತಿಯು Dover New York ರವರಲ್ಲಿ ಮತ್ತೆ ಮತ್ತೆ ಪ್ರಕಟವಾಗುತ್ತಿದೆ. ರವೀಂದ್ರನಾಥ ಠಾಕೂರರ ಅಣ್ಣ ದ್ವಿಜೇಂದ್ರನಾಥ ಠಾಕೂರರೂ (1840-1926) ಕಾಗದ ಮಡಿಕೆಗಳ ಬಗ್ಗೆ ಅಧ್ಯಯನ ನಡೆಸಿದ್ದರು. ಕೆಲವು ಬಂಗಾಲಿ ಪತ್ರಿಕೆಗಳಲ್ಲಿ ಪ್ರಕಟಿಸಿದ್ದರು ಎಂದು ತಿಳಿದುಬರುತ್ತದೆ.

* * *



ರಾಬರ್ಟ್ ಲ್ಯಾಂಗ್

ರಾಬರ್ಟ್ ಲ್ಯಾಂಗ್‌ರವರು ಜೆಟ್ ಪ್ರೊಪಲ್‌ಶನ್ ಲ್ಯಾಬೊರೇಟರಿಯಲ್ಲಿ ಪರಮಾಣು ವಿಜ್ಞಾನಿಯಾಗಿ ಕೆಲಸ ಮಾಡುತ್ತಿದ್ದರು. ಕಾಗದ ಮಡಚುವುದು ಅವರಿಗೊಂದು ಹಾಬಿ. ಕಾಗದ ಮಡಿಸುವಲ್ಲಿನ ಗಣಿತ ಪ್ರಕ್ರಿಯೆಗಳಲ್ಲಿ ಎಷ್ಟು ಪರಿಣತರಾದರೆಂದರೆ Origami and Mathematics ಎಂಬ ಪುಸ್ತಕ ಬರೆದರು. ಮಾದರಿಯನ್ನು ಸೂಚಿಸಿದರೆ ಅದರ ಅಂಚುಗಳನ್ನು ಅಳೆದು ಒಂದು ಖಾಲಿ ಕಾಗದದಲ್ಲಿ ಮಡಚಿ ವಿನ್ಯಾಸಗೊಳಿಸುವ Mind Tree ಎಂಬ ತಂತ್ರಾಂಶ ಬರೆದರು. ಅವರು ಈ ತಂತ್ರಾಂಶ ಬಳಸಿ ರಚಿಸಿದ ಅದ್ಭುತ ಮಾದರಿಗಳು www.Robertlang.comನಲ್ಲಿ ನೋಡಲು ಸಿಗುತ್ತದೆ. ತಮ್ಮ ವೈಜ್ಞಾನಿಕ ಹುದ್ದೆಗೆ ರಾಜಿನಾಮೆ ಸಲ್ಲಿಸಿ, ಈಗ ಪೂರ್ಣ ಪ್ರಮಾಣದ ಒರಿಗಾಮಿ ಮತ್ತು ಗಣಿತಗಳ ಅಧ್ಯಯನ ನಡೆಸಿದ್ದಾರೆ.

ಯಾವುದೇ ಅಗಲದ ಕಾಗದವನ್ನು ಅಂಚಿಗೆ ಅಂಚು ಹೊಂದಿಸಿ ಮಡಿಸಿದರೆ ಎಷ್ಟು



ಬ್ರಿಟನ್ನಿ ಗಲ್ಲಿವಾನ್

ಬಾರಿ ಮಡಿಸಬಲ್ಲಿರಿ ? ನಮಗೆ ಸಿಗುವ ಅತಿ ಅಗಲದ ಕಾಗದವೆಂದರೆ ವೃತ್ತ ಪತ್ರಿಕೆಯೊಂದೇ. ಇದನ್ನು ಕಷ್ಟದಿಂದ 8 ಬಾರಿಗಿಂತ ಜಾಸ್ತಿ ಮಡಿಸಲಾಗದು, ಒಂದು ಅಗಲದ ಕಾಗದವನ್ನು ಒಂದು ನೂರು ಬಾರಿ ಮಡಿಸಿದ್ದಾದರೆ ಅದರ ದಪ್ಪ ಒಂದೂವರೆ ಕಿ.ಮೀ.ಗಿಂತಲೂ ಜಾಸ್ತಿಯಾಗುತ್ತದೆಂದು ಗಣಿತ ರೀತ್ಯಾ ಮನವರಿಕೆಯಾಗುವ ಅಂಶ.

ಆದರೆ ಬ್ರಿಟನ್ನಿ ಗಲ್ಲಿವಾನ್ ಎಂಬ ಹೈಸ್ಕೂಲ್ ಓದುತ್ತಿದ್ದ ಹುಡುಗಿ, ತಾ॥ 22-01-2002ರಲ್ಲಿ ಒಂದು ಉದ್ದನೆಯ ಕಾಗದವನ್ನು 9 ಬಾರಿ ಮಡಿಸಿದಳು. ಅಲ್ಲದೆ ಟೆಲಿವಿಷನ್‌ಗಾಗಿ ನೀಡಿದ ಪ್ರಾತ್ಯಕ್ಷಿಕೆಯಲ್ಲಿ ಒಂದು ಕಾಗದವನ್ನು 14 ಬಾರಿ ಮಡಿಸಿ ಜಗತ್ಪ್ರಸಿದ್ಧಳಾದಳು. ಅವಳ ವೆಬ್‌ಸೈಟ್ www.brittanygallivan.com ಅವಳು ಮಡಿಸಿದ ರೀತಿಯ ವಿಡಿಯೋ ಇದೆ.

* * *

ನಮ್ಮ ದೇಶದಲ್ಲಿ Limca Book of Records ಇದೆ. ಇದರಲ್ಲಿ ನನ್ನದೇ ಆದ ಒರಿಗಾಮಿ ದಾಖಲೆಯೊಂದು 2011ನೇ ಆವೃತ್ತಿಯಲ್ಲಿ ಪ್ರಕಟವಾಗಿದೆ.

ಡಾಯಿಷ್ ಬ್ಯಾಂಕ್ ತನ್ನ 7000 ನೌಕರರಿಗೆ ಹೊಸ ಬಗೆಯ ಚಟುವಟಿಕೆ ಮಾಡಲು Innovation Day ಮಾಡಿತು. ಅದರ ಅಂಗವಾಗಿ ನಾನು ವಿನ್ಯಾಸ ಮಾಡಿದ ಚಿಕ್ಕ ಕಾಗದ ಮಡಿಕೆಗಳನ್ನು ಒಟ್ಟು ಮಾಡಿ, 6 ಅಡಿ ಎತ್ತರದ ರಾಕೆಟ್ ಮಾಡಿದರು. ಇದು ದಾಖಲೆಯಾಗಿದೆ.

* * *

ಇಷ್ಟೊಂದು ರೋಚಕವಾದ ಒರಿಗಾಮಿ, ಜಪಾನಿ ದೇಶದ ಕಲೆ. ಒಂದು ಕಾಗದವನ್ನು ಮಡಿಸಿ ಅದಕ್ಕೆ ಪ್ರಾಣಿ ಪಕ್ಷಿಗಳ ರೂಪ ನೀಡುವ ಕುಶಲ ಕಲೆ. ಇಲ್ಲಿ ಕತ್ತರಿ, ಬ್ಲೇಡ್ ಬಳಸುವಂತಿಲ್ಲ. ಜಪಾನಿ ದೇಶದ ಮನೆಗಳಲ್ಲಿ, ಪ್ರೇತಕೋಷ್ಠವಿರುತ್ತದೆ. ನಮ್ಮಲ್ಲಿ ದೇವರ ಮನೆ ಇರುವ ಹಾಗೆ, ತಮ್ಮ ಪೂರ್ವಿಕರ ಆತ್ಮಗಳು ಅಲ್ಲಿದ್ದು ಮನೆಯವರನ್ನು ಆಶೀರ್ವದಿಸುತ್ತವೆಂಬ ನಂಬಿಕೆ ಅಲ್ಲಿದೆ. ಇಂತಹ ಪ್ರೇತಕೋಷ್ಠಗಳಲ್ಲಿ ಹೂವು ಹಣ್ಣು ಇಡುವುದಿಲ್ಲ, ಕಾಗದದ ಸಣ್ಣ ಮಾದರಿಗಳನ್ನು ಇಡುತ್ತಾರೆ. ಹಬ್ಬ ಹರಿದಿನಗಳಲ್ಲಿ ಉಡುಗೊರೆ ನೀಡುವಾಗ, ಒಂದು ಕಾಗದ ಮಡಿಕೆಯ ಹೂವನ್ನೋ ಕ್ರೇನ್‌ಹಕ್ಕಿಯ ಮಾದರಿಯನ್ನೋ ಜೊತೆಗೆ ಇಡುತ್ತಾರೆ. ಒರಿಗಾಮಿ ಜಪಾನಿ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದೆ.

ಅಮೆರಿಕನ್ನರಿಂದಾಗಿ ಒರಿಗಾಮಿಗೆ ಅಬ್ಬರದ ಪ್ರಚಾರ ಸಿಕ್ಕಿತು. 1940ರಿಂದ ಈಚೆಗೆ ಒರಿಗಾಮಿ ಕ್ಲಬ್‌ಗಳು ಅಲ್ಲಿ ಹುಟ್ಟಿಕೊಂಡವು.

* * *

1956ರಲ್ಲಿ ಅಕಿರಾ ಯೋಷಿಜಾವ ಎಂಬ ಜಪಾನಿನ ಒರಿಗಾಮಿ ತಜ್ಞನು, ಕಾಗದ ಮಡಿಸುವ ರೀತಿಗೆ ಒಂದು ಭಾಷೆಯ ಸ್ವರೂಪ ನೀಡಿದನು. ಅಕ್ಷರ ಲಿಪಿಯ



**Limca**

*Book of Records*

***National Record 2012***

At **Deutsche Bank (DBOI)**, Electronic City, Bangalore, the largest jointly-made origami structure of a rocket (5 ft 7 inches tall) was put up on July 9, 2010. It was a collaborative effort by 5,557 employees of the bank from **3 different locations** (Bangalore, Mumbai and Jaipur), **who pitched in with their own** 5 x 10 inch origami structures. It was finally put together under the expertise of **Sivashankara Sastry**, an origami maestro in Bangalore, who guided 25 employees of DBOI to create the rocket. The entire exercise, which started on July 1, 2010, was to foster and reinforce the importance of teamwork.

*Vijaya Ghose*

*Editor, Limca Book of Records*

ವಿವರಣೆಯಿಲ್ಲದೆಯೇ ಬರೀ ಚಿತ್ರಗಳನ್ನು ನೋಡಿಯೇ, ಕಾಗದ ಮಡಿಸಿ ಮಾದರಿಗಳನ್ನು ತಯಾರಿಸಲು ಇದರಿಂದ ಸಾಧ್ಯವಾಯಿತು. ಭಾಷೆ ಹುಟ್ಟಿದ ಬಳಿಕ ಒರಿಗಾಮಿ ತೀವ್ರ ವೇಗದಿಂದ ಪ್ರಚಾರಗೊಂಡಿತು. ವಿವಿಧ ವಿಷಯ ತಜ್ಞರು ಒರಿಗಾಮಿಗೆ ಪ್ರವೇಶಿಸುವಂತಾಯಿತು.

* * *

NASA ಗೆ ಸಮಸ್ಯೆಯೊಂದು ಎದುರಾಯಿತು. ಗಗನನೌಕೆಯಲ್ಲಿ ಸೌರಕೋಶಗಳನ್ನು ಮಡಿಸಿಟ್ಟು ಕಳುಹಿಸಿ ಅವು ವ್ಯೋಮದಲ್ಲಿ ತೆರೆದುಕೊಳ್ಳುವಂತೆ (ಅತಿ ಕಡಿಮೆ ಶಕ್ತಿಯನ್ನು ಬಳಸಿ), ಸೂರ್ಯನ ಬೆಳಕಿಗೆ ಎದುರಾಗಿ ನಿಲ್ಲಿಸಬೇಕಾಗಿತ್ತು. ಇದಕ್ಕಾಗಿ ಅವರು ಒರಿಗಾಮಿ ತಜ್ಞರನ್ನು ಕೋರಿದರು. ಅವರು ನೀಡಿದ ವಿನ್ಯಾಸವನ್ನೇ ಬಳಸಿ ಯಶಸ್ಸು ಕಂಡರು. ಇದೀಗ



ಅಕಿರಾ ಯೋಷಿಜಾವ



ಕೋರ್ಯೋ ಮಿಯುರಾ

ಒಂದು ಕಿ.ಮೀ ವ್ಯಾಸದ ನಿಮ್ನದರ್ಪಣವನ್ನು ಅಂತರಿಕ್ಷಕ್ಕೆ ಕಳುಹಿಸಿ ಟೆಲಿಸ್ಕೋಪ್ ತಯಾರಿಸುವ ಯೋಜನೆಯಲ್ಲಿ ರಾಬರ್ಟ್ ಲ್ಯಾಂಗ್ ಭಾಗಿಯಾಗಿದ್ದಾನೆ. ಇವನ ಕಾರ್ಯ, ಒಂದು ಕಿ.ಮೀ ವ್ಯಾಸದ ಲೋಹದ ತಗಡನ್ನು ಮಾಡಿಸಿ, ಅಂತರಿಕ್ಷದಲ್ಲಿ ಅದನ್ನು ಬಿಚ್ಚಿ ನಿಮ್ನದರ್ಪಣವಾಗಿಸುವುದು. ಜಪಾನಿಯರು 1995ರಲ್ಲಿ ಚಂದ್ರನೆಡೆಗೆ ತಮ್ಮ ಕಗೂಯಾ ಹೆಸರಿನ ನೌಕೆಯನ್ನು ಕಳುಹಿಸಿದರು. ಇವರಿಗೂ ಸೌರಕೋಶಗಳದ್ದೇ ಸಮಸ್ಯೆ. ಇದಕ್ಕಾಗಿ ತಮ್ಮ ದೇಶದ ಒರಿಗಾಮಿ ತಜ್ಞರ ಮೊರೆ ಹೋದರು. ಕೋರ್ಯೋ ಮಿಯುರಾ ಎಂಬ ಖಗೋಳಜ್ಞಾನ ಪ್ರೊಫೆಸರ್‌ನು ನೀಡಿದ ವಿನ್ಯಾಸದಂತೆ ಸೋಲಾರ್ ಪ್ಯಾನೆಲ್ ಮಡಿಸಿಟ್ಟು ಯಶಸ್ಸು ಪಡೆದರು. ಇದಕ್ಕೆ ಪೇಟೆಂಟ್ ಇದೆ. ಆದರೂ ಈ ಮಡಿಕೆಯನ್ನು www.miura-ori.com ಎಂಬ ವೆಬ್‌ಸೈಟ್‌ನಲ್ಲಿ ನೋಡಿ ನೀವೂ ಕಾಗದ ಮಡಿಸಿ, ಅದು ತೆರೆದುಕೊಳ್ಳುವ ರೀತಿಯನ್ನು ನೋಡಿ ವಿಸ್ಮಯ ಪಡೆಯಬಹುದು.

* * *



ಜೆಟ್ ಪ್ರೊಪಲ್‌ಶನ್ ಲ್ಯಾಬ್‌ನಲ್ಲಿ, ರಾಬರ್ಟ್ ಲ್ಯಾಂಗ್ ತಮ್ಮ ಪ್ರಾಯೋಗಿಕ ದರ್ಪಣದ ಮುಂದೆ ನಿಂತಿದ್ದಾರೆ

ಎರಿಕ್ ಡಿಮ್ಯೆನ್‌ರವರಿಗೆ ಈಗ 26 ವರ್ಷ. ಅವರು ಅತಿ ಪ್ರತಿಷ್ಠಿತ MIT-(Massachusets Institute of Technology)ಯಲ್ಲಿ Origami and Maths ಇಲಾಖೆಗೆ ಮುಖ್ಯಸ್ಥರಾಗಿದ್ದಾರೆ. ಇವರ Ph.D. ಪ್ರಬಂಧದ ಹೆಸರು 'Paper Folding Problem'



ಎರಿಕ್ ಡಿಮ್ಯೆನ್

*　　　*　　　*

ಹೃದಯದ ನಾಳಗಳಲ್ಲಿ ಕೊಬ್ಬು ಸಂಚಯಗೊಂಡಾಗ ಅದನ್ನು ಹೊರತೆಗೆಯಲು ಸ್ಟೆಂಟ್ ಬಳಸುತ್ತಾರೆ. ತೊಡೆಯ, ಅಪಧಮನಿಯ ಮೂಲಕ ತಂತಿ ತೂರಿಸಿ ಬಲೂನಿನಂತಹ ಹಿಗ್ಗುವ ಸ್ಟೆಂಟ್ ಕಳುಹಿಸಿ, ಕೊಬ್ಬನ್ನು ಹೊರದೂಡಿ ಶುದ್ಧಿ ಮಾಡುತ್ತಾರೆ. ಈ ಸ್ಟೆಂಟ್‌ನ ವಿನ್ಯಾಸವನ್ನು ಒರಿಗಾಮಿ ಮಡಿಕೆಯ ವಿನ್ಯಾಸದಿಂದ ಮಾಡಿದ್ದಾರೆ. ಇದಕ್ಕಾಗಿ ನೋಡಿ www.origamistuntdesign.com ಹೀಗೆ ಇಂದು ವೈವಿಧ್ಯಮಯ ಕ್ಷೇತ್ರಗಳಲ್ಲಿ ಬಳಕೆಯಾಗುತ್ತಿರುವ ಒರಿಗಾಮಿ ಅನೇಕ ಪಿಎಚ್‌ಡಿ ಸಂಶೋಧನಾ ಪ್ರಬಂಧಗಳಿಗೆ ವಿಷಯವಾಗಿ ಬೆಳೆದಿದೆ. ಹಕ್ಕಿಗಳ ರೆಕ್ಕೆಗಳು, ಎಲೆಗಳ ಮಡಿಕೆಗಳು ಇಂತಹ ನೈಸರ್ಗಿಕ ಮಡಿಕೆಗಳನ್ನೂ ಅಧ್ಯಯನಕ್ಕೆ ಒಳಪಡಿಸಿದೆ.

*　　　*　　　*

ಹೀಗೆ ಅತಿ ರೋಚಕ ವಿಷಯಗಳು ಒರಿಗಾಮಿಗೆ ದಕ್ಕಿವೆ. ಈಗ ಒರಿಗಾಮಿಯನ್ನು ವಿಜ್ಞಾನದ ಒಂದು ಅಂಗ ಎಂದೇ ಪರಿಗಣಿಸಲಾಗಿದೆ. 1989ರಲ್ಲಿ ಇಟೆಲಿಯಲ್ಲಿ ಒರಿಗಾಮಿ ಮತ್ತು ಶಿಕ್ಷಣ ಕುರಿತು ಅಂತರರಾಷ್ಟ್ರೀಯ ಸಮ್ಮೇಳನ ನಡೆಯಿತು. ಶಿಕ್ಷಣರಂಗದಲ್ಲಿ ಇದರ ಮಹತ್ವವನ್ನು ಎತ್ತಿ ಹಿಡಿಯಿತು. 1893ರಲ್ಲಿ ಸುಂದರರಾಯರು ಹಾಕಿದ ತಳಪಾಯದಿಂದ ಒರಿಗಾಮಿ ಮತ್ತು ಗಣಿತವನ್ನು ಬೆಸೆಯುವಂತಾಗಿದೆ. ಅಂದು ಆ ನಿವೃತ್ತ ಗಣಿತ ಹೆಡ್‌ಮಾಸ್ಟರ್ ಕಂಡ ಗಣಿತವನ್ನು ಇಂದು ನಮ್ಮ ಮಕ್ಕಳಿಗೆ ಕಲಿಸಬೇಕಾಗಿದೆ. ಏಕೆಂದರೆ ಎಲ್ಲೆಡೆ ಕಾಗದ ಲಭ್ಯ. ಎಲ್ಲೆಡೆ ನಮ್ಮ ಶಾಲೆಗಳಲ್ಲಿ ಗಣಿತ ಕಲಿಕೆ ಕಷ್ಟ. ಕಾಗದ ಮಡಿಕೆಯಿಂದ ಈ ತೊಂದರೆಯನ್ನು ಕೊಂಚಮಟ್ಟಿಗೆ ನಿವಾರಿಸಲು ಸಾಧ್ಯ. ನಾವು ಮಕ್ಕಳಿಗೆ ರಾಬರ್ಟ್ ಲ್ಯಾಂಗ್‌ರವರ ಅದ್ಭುತ ಮಡಿಕೆಗಳ ಮಾದರಿಗಳನ್ನು ಪರಿಚಯಿಸುವುದು ಬೇಡ. ಆದರೆ ವಿವಿಧ ಕೋನಗಳು, ಪ್ರಮೇಯಗಳು, ಕ್ಷೇತ್ರಫಲಗಳನ್ನು ವಿಶದಪಡಿಸಲು ಒರಿಗಾಮಿ ಬಳಸಿದರೆ ಸಾಕು. ಈ ನಿಟ್ಟಿನಲ್ಲಿ ಈ ಪುಸ್ತಕವು ಪ್ರಯತ್ನಿಸುತ್ತದೆ.

# 2. ಒರಿಗಾಮಿ ಮೂಲಕ ಗಣಿತ

ಪಠ್ಯ ಪುಸ್ತಕದ ಪರಿಕಲ್ಪನೆಗಳನ್ನೇ ಸರಳ ಕಾಗದ ಮಡಿಕೆಗಳ ಮಾದರಿಗಳಲ್ಲಿ ಇಲ್ಲಿ ವಿವರಿಸಲಾಗಿದೆ. ಆದರೆ ಪಠ್ಯ ಪುಸ್ತಕದ ಪ್ರತಿ ಹಾಳೆಗೂ ಒಂದು ಮಾದರಿ ಇದರಲ್ಲಿಲ್ಲ. ಇದು ಪಠ್ಯಕ್ಕೆ ಪೂರಕ. ಇದನ್ನೇ ಪಠ್ಯವಾಗಿ ಬಳಸಲಾಗದು. ಕಲಿಕೆ ಕ್ಲಿಷ್ಟವೆಂದು ನಾನು ಬಗೆದು ಮತ್ತು ಅದರ ತಿಳಿವಿಗಾಗಿ ನನಗೆ ಹೊಳೆದ ಕಾಗದ ಮಡಿಕೆಗಳ ಕೆಲವು ಮಾದರಿಗಳು ಮಾತ್ರ ಇಲ್ಲಿವೆ.

ಇತ್ತೀಚೆಗೆ ಗಣಿತ ಪ್ರಯೋಗಶಾಲೆಯ ಕಲ್ಪನೆ ಬಂದಿದೆ. ಈ ಪುಸ್ತಕದ ರಚನೆಗಳು ಅದಕ್ಕೆ ಸೂಕ್ತ. ಏಕೆಂದರೆ ಕಾಗದವು ಎಲ್ಲೆಡೆ ಅಂದರೆ ಹಳ್ಳಿ, ನಗರ, ಕೋಟೆ, ಪೇಟೆಗಳಲ್ಲಿ ಲಭ್ಯ. ಅದಕ್ಕೆ ಹೆಚ್ಚು ವೆಚ್ಚವಿಲ್ಲ.

## ಒರಿಗಾಮಿಗೆ ಎಂತಹ ಕಾಗದ ಬೇಕು?

ನಮ್ಮ ದೇಶದಲ್ಲಿ ಜಪಾನಿನ ಒರಿಗಾಮಿ ಕಾಗದ (Rice paper) ಸಿಗುವುದಿಲ್ಲ. ಈ ಪುಸ್ತಕದಲ್ಲಿ ವಿವರಿಸಿರುವ ಮಾದರಿಗಳಿಗೆ ಇದು ಬೇಡವೂ ಬೇಡ. ನಿಮಗೆ A4 ಗಾತ್ರದ Xerox ಪೇಪರ್ (80 gsm)ಕಾಗದ ಸಾಕು. ಇದರಲ್ಲಿ ಕಲರ್ ಜೆರಾಕ್ಸ್ ಸಿಗುತ್ತದೆ ಅದಿದ್ದರೆ ಚೆನ್ನ.

## ಕಾಗದ ಮಡಿಸಿದಾಗ ಏನಾಗುತ್ತದೆ?

ಇದನ್ನು ತಿಳಿಯಲು ಕಾಗದ ಮಡಿಸಿಯೇ ನೋಡಬೇಕು. ಇದಕ್ಕಾಗಿ ಒಂದು ಚೌಕಾಕಾರದ ಕಾಗದ ABCD ತೆಗೆದುಕೊಳ್ಳಿ. ಮೂಲೆಗಳ ಎರಡೂ ಬದಿಗಳಲ್ಲಿ ABCD ಬರೆಯಿರಿ.

ಈ ಚಿತ್ರಗಳಲ್ಲಿ ಕಾಣಿಸಿದಂತೆ ಮಡಿಸಿ ಮಡಿಕೆಗಳನ್ನು ಬೆರಳಿನಿಂದ ಒತ್ತಿರಿ. ಬಳಿಕ ಮಡಿಕೆ ತೆರೆದು ನೋಡಿ. ನಿಮಗೆ ಈ ಮಡಿಕೆಯ ಜಾಗದಲ್ಲಿ ಒಂದು ನೇರ ಗೆರೆ ಕಾಣುತ್ತದೆ. ಇದಕ್ಕೆ ಅಂಕು, ಡೊಂಕುಗಳಿಲ್ಲ. ಈಗ ಇದೇ ಕಾಗದದಲ್ಲಿ ಇನ್ನೊಂದು ಮಡಿಕೆಯುಂಟುಮಾಡಿ.



*ಚಿತ್ರ 2.1*



*ಚಿತ್ರ 2.2*



*ಚಿತ್ರ 2.3*



*ಚಿತ್ರ 2.4*



*ಚಿತ್ರ 2.5*



*ಚಿತ್ರ 2.6*

ಈ ಎರಡೂ ರೇಖೆಗಳು ಒಂದು ಬಿಂದುವಿನಲ್ಲಿ ಛೇದಿಸುತ್ತವೆ. ಬಿಂದುವೆಂದರೆ, ಗಣಿತ ಭಾಷೆಯಲ್ಲಿ ತ್ರಿಜ್ಯವಿಲ್ಲದ ವೃತ್ತ. ನಾವು ಮಡಿಸಿದ, ಕೇವಲ ಎರಡು ಮಡಿಕೆಗಳಲ್ಲಿ ಈ ಕೆಳಗೆ ಸೂಚಿಸಿದ ಗಣಿತೀಯ ಸಂಬಂಧಗಳು ಇವೆ.

$E\hat{P}H = G\hat{P}F$

$E\hat{P}G = H\hat{P}F$




*ಚಿತ್ರ 2.7*

ಇದೂ ಅಲ್ಲದೆ ABCD ಚೌಕವು =(AEPG+EBHP+PHCF+GPFD) ಚತುರ್ಭುಜಗಳಿಗೆ ಸಮನಾಗಿದೆ.

ಹೀಗೆ ಕೇವಲ ಎರಡು ಮಡಿಕೆಗಳು ಇಷ್ಟು ಗಣಿತ ನೀಡಬಲ್ಲವಾದರೆ ಹಲವಾರು ಮಡಿಕೆಗಳು ಮೂಡಿಸುವ ಗೆರೆಗಳು ಹಲವು ಸಾಧ್ಯತೆಗಳ ಆಗರವಾಗಿರುತ್ತವೆ, ಯಾವುದೋ ಕೋನ, ಯಾವುದೋ ಕ್ಷೇತ್ರಫಲ ಇನ್ನಾವುದೋ ಗೆರೆ___ಗಣಿತೀಯ ಸಂಬಂಧಗಳನ್ನು ಬಿಡಿಸಿಡುತ್ತವೆ.

## ಗಮನಿಸಬೇಕಾದ ಅಂಶಗಳು

* ಒರಿಗಾಮಿ – ಕಾಗದ ಮಡಿಕೆಯ ಕಲೆ, ಆದರೆ ಯದ್ವಾತದ್ವಾ ಮಡಿಕೆಗಳಲ್ಲ, ಶಿಸ್ತುಬದ್ಧ, ತಾಳ್ಮೆ ಬೇಡುವ ಮಡಿಕೆಗಳುಳ್ಳ ಕಲೆ.
* ಪುಸ್ತಕದಲ್ಲಿ ಕಾಣಿಸಿದ ಆಕೃತಿಯ, ಉದ್ದ / ಅಗಲಗಳ ಕಾಗದವನ್ನೇ ಬಳಸಬೇಕು. ಇಲ್ಲವಾದರೆ ಮಾದರಿ ಕೆಡುತ್ತದೆ.
* 1,2,3...........ರಂತೆ ಗುರುತಿಸಿದ ಹಂತಗಳಲ್ಲೇ ಕಾಗದದ ಮಡಿಕೆಗಳು ಮುಂದುವರೆಯಬೇಕು, ಒಂದಾದರೂ ಹಂತ ಹಾರಿಸಿದರೆ, ಹತ್ತುಪಟ್ಟು ತಲೆಕೆಡುತ್ತದೆ.
* ಕಾಗದವನ್ನು ಮಡಿಸುವಾಗ ಬೆರಳುಗಳನ್ನು ಬಳಸಿ ಅಂಚುಗಳನ್ನು ಉಗುರಿನಿಂದ ಒತ್ತಿ ತೀಡಿ, ಇಲ್ಲವಾದರೆ ಮಾದರಿಗಳನ್ನು ತೆರೆದಾಗ ಒಳಗಿನ ಗೆರೆಗಳು ಮಸುಕಾಗಿರುತ್ತವೆ.
* ಮಾದರಿಯನ್ನು ಮಾಡಿ, ಅದರೊಳಗಿನ ಗಣಿತ ತಿಳಿದುಕೊಂಡ ನಂತರ ಬಿಸಾಡಬೇಡಿ. ಅದೇ ಕಾಗದದ ಹಿಂಬದಿಯಲ್ಲಿ ಅವೇ ಗೆರೆಗಳಿರುತ್ತವೆ. ಇವನ್ನು ಮುಂಬರುವ ಶೋಧನೆಗಾಗಿ ಬಳಸಿಕೊಳ್ಳಿ.

## 3. ಒರಿಗಾಮಿ ಚಿಹ್ನೆಗಳು

ಒರಿಗಾಮಿ ಮಡಿಕೆಗಳನ್ನು ಮಾಡಲು ಕೆಳಗಿನ ಚಿಹ್ನೆಗಳನ್ನು ಬಳಸುತ್ತಾರೆ.

| ಚಿಹ್ನೆ | | ಮಡಿಸುವ ಮೊದಲು | ಮಡಿಸಿದ ಬಳಿಕ |
|---|---|---|---|
|  | ಹೀಗೆ ಮಡಿಸಿ |  |  |
|  | ಮಡಿಸಿದ ಬಳಿಕ ವಾಪಸ್ ತನ್ನಿ |  |  |
|  | ಮಾದರಿಯನ್ನು ಹಿಂತಿರುಗಿಸಿ |  |  |
|  | ಎರಡು ಎಸಳುಗಳ ನಡುವೆ ಮಡಿಸಿ ಅಥವಾ ಒಳಗೆ ತಳ್ಳಿ |  |  |
| | ಮಾದರಿಯ ಹಿಂಬದಿಗೆ ಮಡಿಸಿ |  |  |



ಗುಡ್ಡದ ಮಡಿಕೆ ಅಥವಾ ಉಬ್ಬು ಮಡಿಕೆ

ಕಣಿವೆ ಮಡಿಕೆ



ಗೆರೆಯ ಗುಂಟಕತ್ತರಿಸಿ ಅಥವಾ ತಗ್ಗಿನ ಮಡಿಕೆ



ಮಾದರಿಯ ಮಡಿಕೆಯನ್ನು ಬಿಡಿಸಿ



# 4. ಕಾಗದದಿಂದ ವಿವಿಧ ಜ್ಯಾಮಿತೀಯ ಆಕೃತಿಗಳು

## ಜ್ಯಾಮಿತೀಯ ಆಕೃತಿಗಳನ್ನು ಪಡೆಯುವ ಬಗೆ

ಅನೇಕ ಜ್ಯಾಮಿತೀಯ ಆಕೃತಿಗಳಲ್ಲಿ ಸಮಮಿತಿಯಿರುತ್ತದೆ. ಸಮ ಸಂಖ್ಯೆಯ ಬಾಹುಗಳುಳ್ಳ ಆಕೃತಿಗಳನ್ನು ಪಡೆಯುವುದು ಸುಲಭ, ಬೆಸ ಸಂಖ್ಯೆಯ ಬಾಹುಗಳ ಆಕೃತಿಗಳು ಕಷ್ಟ. ಇಲ್ಲಿ ಒಂದು A4 – ಆಯತಾಕಾರದ ಕಾಗದದಿಂದ ವಿವಿಧ ಜ್ಯಾಮಿತೀಯ ಆಕೃತಿಗಳನ್ನು ಪಡೆಯುವ ಬಗೆಯನ್ನು ವಿವರಿಸಲಾಗಿದೆ.

## ಆಯತದಿಂದ ಚೌಕ ಪಡೆಯುವ ಬಗೆ




*ಚಿತ್ರ 4.1*

AB ಯನ್ನು BD ಗೆ ಹೊಂದಿಸಿ




*ಚಿತ್ರ 4.2*

ಮಡಿಕೆಯ ತಳದ ಗುಂಟ ಕತ್ತರಿಸಿ

ಈಗ ನಿಮಗೆ ಚೌಕವೊಂದು ಸಿಗುತ್ತದೆ







ಹೆಚ್ಚುವರಿ ಕಾಗದ

*ಚಿತ್ರ 4.3*

## ಚೌಕದಿಂದ ಲಂಬಕೋನ ತ್ರಿಕೋನ ಪಡೆಯುವುದು




*ಚಿತ್ರ 4.4*

ಒಂದು ಚೌಕ ಕಾಗದ ತೆಗೆದುಕೊಳ್ಳಿ
Aಯನ್ನು Cಗೆ ಮಡಿಸಿ




*ಚಿತ್ರ 4.5*

BDಯ ಗುಂಟ ಕತ್ತರಿಸಿ




*ಚಿತ್ರ 4.6*

ನಿಮಗೆ ಎರಡು ಲಂಬಕೋನ ತ್ರಿಭುಜಗಳು ಸಿಗುತ್ತವೆ.

## ಆಯತದಿಂದ ಲಂಬಕೋನ ತ್ರಿಭುಜ ಪಡೆಯುವುದು

1.




*ಚಿತ್ರ 4.7*

A ಯನ್ನು BC ಗೆ ಮಡಿಸಿ

2.




*ಚಿತ್ರ 4.8*

ಮಡಿಕೆಯ ಗುಂಟ ಕತ್ತರಿಸಿ

3.




*ಚಿತ್ರ 4.9*

ನಿಮಗೆ ಒಂದು ಲಂಬಕೋನ ಸಿಗುತ್ತದೆ

## ಚೌಕದಿಂದ ಸಮಬಾಹು ತ್ರಿಕೋನವನ್ನು ಪಡೆಯುವುದು




*ಚಿತ್ರ 4.10*

ಚೌಕದಿಂದ ಶುರುಮಾಡಿ




*ಚಿತ್ರ 4.11*

AD ಯನ್ನು BC ಯ ಮೇಲೆ ಮಡಿಸಿ

ತೆರೆಯಿರಿ






*ಚಿತ್ರ 4.12*

AB ಶೃಂಗಗಳನ್ನು ಕೇಂದ್ರದ ಗೆರೆಗೆ ಮಡಿಸಿ




*ಚಿತ್ರ 4.13*

DA ಮತ್ತು BC ಯ ಗುಂಟ ಕತ್ತರಿಸಿ



*ಚಿತ್ರ 4.14*

ಸಮಬಾಹು ತ್ರಿಭುಜ

## ಆಯತದಿಂದ ಸಮಬಾಹು ತ್ರಿಕೋನವನ್ನು ಪಡೆಯುವುದು




*ಚಿತ್ರ 4.15*

AB ಯನ್ನು BC ಗೆ ಮಡಿಸಿ




*ಚಿತ್ರ 4.16*

ಮಡಿಕೆಯನ್ನು ಹಿಂದೆ ಸರಿಸಿ ಒಂದು ಗೆರೆ ಮೂಡಿರುವುದನ್ನು ನೋಡಿ




*ಚಿತ್ರ 4.17*

A ಯನ್ನು ಮಧ್ಯಗೆರೆಗೆ ಮಡಿಸಿ




*ಚಿತ್ರ 4.18*

B ಶೃಂಗವನ್ನು ಮಡಿಸಿದ ಅಂಚಿಗೆ ಹೊಂದಿಸಿ ಮಡಿಸಿ ತೆರೆಯಿರಿ




*ಚಿತ್ರ 4.19*

ಮಾದರಿಯು ಹೀಗೆ ಕಾಣುತ್ತದೆ. ಇದನ್ನು ಬಿಡಿಸಿ

ತೆರೆಯಿರಿ






*ಚಿತ್ರ 4.20*

ಮಡಿಕೆ ಮೂಡಿಸಿದ ಗೆರೆಯ ಗುಂಟ ಕತ್ತರಿಸಿ. ಸಮಬಾಹು ತ್ರಿಭುಜ ದೊರಕುತ್ತದೆ

## ಚೌಕದಿಂದ ಸಮದ್ವಿಬಾಹು ತ್ರಿಭುಜವನ್ನು ಪಡೆಯುವುದು




*ಚಿತ್ರ 4.21*

ಚೌಕದಿಂದ ಶುರುಮಾಡಿ
ADಯನ್ನು BC ಗೆ ಮಡಿಸಿ




*ಚಿತ್ರ 4.22*




*ಚಿತ್ರ 4.23*

EDಯ ಗುಂಟ ಕತ್ತರಿಸಿ
ಮಾದರಿಯನ್ನು ಬಿಡಿಸಿ




*ಚಿತ್ರ 4.24*

ಸಮದ್ವಿಬಾಹು ತ್ರಿಭುಜ

## ಆಯತದಿಂದ ಸಮದ್ವಿಬಾಹು ತ್ರಿಭುಜವನ್ನು ಪಡೆಯುವುದು




*ಚಿತ್ರ 4.25*

AB ಯನ್ನು DC ಗೆ ಮಡಿಸಿ




*ಚಿತ್ರ 4.26*

ಮೇಲಿನ ಅಂಚಿನ ಮೇಲೆ ಯಾವುದೇ
ಸಮದ್ವಿಬಾಹು ತ್ರಿಭುಜ ಬಿಂದು E ಗುರ್ತಿಸಿ.
E ಬಿಂದುವು ತ್ರಿಭುಜ ಶೃಂಗ ಕೋನವನ್ನು
ನಿರ್ಧರಿಸುತ್ತದೆ. AE ಯ ಗುಂಟ ಕತ್ತರಿಸಿ




*ಚಿತ್ರ 4.27*

ಸಮದ್ವಿಬಾಹು ತ್ರಿಭುಜ

## ಚೌಕದಿಂದ ವಜ್ರಾಕೃತಿಯನ್ನು ಪಡೆಯುವುದು




*ಚಿತ್ರ 4.28*

ಚೌಕ ಕಾಗದ ತೆಗೆದುಕೊಳ್ಳಿ.
AB ಯನ್ನು DC ಗುಂಟ ಮಡಿಸಿ




*ಚಿತ್ರ 4.29*

Aಯನ್ನು B ಗೆ ಮಡಿಸಿ




*ಚಿತ್ರ 4.30*

ಕರ್ಣದ ಗುಂಟ ಕತ್ತರಿಸಿ

ತೆರೆಯಿರಿ



*ಚಿತ್ರ 4.31*

ವಜ್ರಾಕೃತಿ

## ಆಯತದಿಂದ ವಜ್ರಾಕೃತಿಯನ್ನು ಪಡೆಯುವುದು




*ಚಿತ್ರ 4.32*

AB ಯನ್ನು DCಗೆ ಮಡಿಸಿ




*ಚಿತ್ರ 4.33*

Aಯನ್ನು Bಗೆ ಮಡಿಸಿ

ತೆರೆಯಿರಿ




*ಚಿತ್ರ 4.34*

ಎಲ್ಲಾ ಎಸಳುಗಳನ್ನು
ಕರ್ಣದ ಗುಂಟ ಕತ್ತರಿಸಿ



*ಚಿತ್ರ 4.35*

ವಜ್ರಾಕೃತಿ

## ಚೌಕದಿಂದ ಸಮಾಂತರ ಚತುರ್ಭುಜ ಪಡೆಯುವುದು




*ಚಿತ್ರ 4.36*

ಚೌಕ ಕಾಗದ ತೆಗೆದುಕೊಳ್ಳಿ.
AD ಯನ್ನು BC ಮೇಲೆ ಮಡಿಸಿ




*ಚಿತ್ರ 4.37*

E ಬಿಂದುವನ್ನು AB ಯ
ಮೇಲೆ ಗುರ್ತಿಸಿ




*ಚಿತ್ರ 4.38*

DE ಗುಂಟ ಕತ್ತರಿಸಿ







*ಚಿತ್ರ 4.39*

F ನಿಂದ DC ಲಂಬವನ್ನು ಮಡಿಸಿ




*ಚಿತ್ರ 4.40*

FC ಯ ಗುಂಟ ಕತ್ತರಿಸಿ




*ಚಿತ್ರ 4.41*

ಸಮಾಂತರ ಚತುರ್ಭುಜ

## ಆಯತ ಅಥವಾ ಚೌಕದಿಂದ ವೃತ್ತಾಕಾರ ಪಡೆಯುವುದು




*ಚಿತ್ರ 4.42*

ಚೌಕ ಕಾಗದದಿಂದ ಶುರು ಮಾಡಿ.
DC ಯನ್ನು AB ಗೆ ಮಡಿಸಿ




*ಚಿತ್ರ 4.43*

D ಯನ್ನು C ಗೆ ಮಡಿಸಿ




*ಚಿತ್ರ 4.44*

ಮಾದರಿಯನ್ನು ತಿರುಗಿಸಿಡಿ




*ಚಿತ್ರ 4.45*

Aಯನ್ನು ಪಾರ್ಶ್ವಕ್ಕೆ ಮಡಿಸಿ




*ಚಿತ್ರ 4.46*

ಮಧ್ಯರೇಖೆಗೆ Aಯನ್ನು ಮಡಿಸಿ




*ಚಿತ್ರ 4.47*

ಉಗುರಿನಿಂದ ಒತ್ತಿ




*ಚಿತ್ರ 4.48*

ಗೆರೆಯ ಗುಂಟ ಕತ್ತರಿಸಿ




*ಚಿತ್ರ 4.49*

Aಯನ್ನು ಪಕ್ಕಕ್ಕೆ ಮಡಿಸಿ




*ಚಿತ್ರ 4.50*

ಅಂಚುಗಳನ್ನು ಸಮಮಾಡಿ ಕತ್ತರಿಸಿ



*ಚಿತ್ರ 4.51*

ವೃತ್ತ

20 ಸೆಂ.ಮೀ x 20 ಸೆಂ.ಮೀ ಚೌಕಾಕಾರದಲ್ಲಿ ವೃತ್ತವು ಚೆನ್ನಾಗಿ ಮೂಡಿ ಬರುವುದು.

## ಆಯತದಿಂದ ಷಡ್ಭುಜವನ್ನು ಪಡೆಯುವುದು




*ಚಿತ್ರ 4.52*
ಒಂದು A4 ಕಾಗದ
ತೆಗೆದುಕೊಳ್ಳಿ




*ಚಿತ್ರ 4.53*
B ಶೃಂಗವನ್ನು ಗೆರೆಯ ಮೇಲೆ
ತಂದು ಮಡಿಸಿ




*ಚಿತ್ರ 4.54*
A ಯನ್ನು B ಮೇಲೆ ಹೊದ್ದಿಸಿ




*ಚಿತ್ರ 4.55*
ಹಿಂದಕ್ಕೆ ತಿರುಗಿಸಿ




*ಚಿತ್ರ 4.56*
ಕತ್ತರಿಸಿ, ಅಗಲ ಮಾಡಿ



*ಚಿತ್ರ 4.57*

ತೆರೆಯಿರಿ



*ಚಿತ್ರ 4.58*
ಷಡ್ಭುಜ ದೊರೆಯುತ್ತದೆ

## ಅಷ್ಟಭುಜ ಆಕೃತಿ



*ಚಿತ್ರ 4.59*

ಒಂದು ಚೌಕ ಕಾಗದದಲ್ಲಿ ಕರ್ಣಗಳನ್ನು ಮಡಿಸಿ



*ಚಿತ್ರ 4.60*

ತಳವನ್ನು ಮೇಲಕ್ಕೆ ಮಡಿಸಿ



*ಚಿತ್ರ 4.61*

ಎಡ ಅಂಚನ್ನು ಬಲಕ್ಕೆ ಮಡಿಸಿ



*ಚಿತ್ರ 4.62*

ವಜ್ರಾಕೃತಿಯಂತೆ ತಿರುಗಿಸಿಡಿ



*ಚಿತ್ರ 4.63*

ಮೊದಲ ಎಸಳನ್ನು ಕೆಳಗೆ ಮಡಿಸಿ, ಗೆರೆಹಾಕಿ ವಾಪಸ್ ಮಡಿಸಿ. ನಿಮಗೊಂದು ಮಧ್ಯರೇಖೆ ಕಾಣುತ್ತದೆ



*ಚಿತ್ರ 4.64*

ಮಡಿಸಿದ ಗೆರೆಗಳ ಮೂಲಕ ಕತ್ತರಿಸಿ



*ಚಿತ್ರ 4.65*

ನಿಮಗೆ ಅಷ್ಟಭುಜಾಕೃತಿ ಸಿಗುತ್ತದೆ

## ದ್ವಾದಶಭುಜಾಕೃತಿ



*ಚಿತ್ರ 4.66*

A4 ಕಾಗದದಿಂದ
ಷಡ್ಭುಜವನ್ನು ಮಾಡಿ



*ಚಿತ್ರ 4.67*

ಷಡ್ಭುಜವನ್ನು ಅರ್ಧಕ್ಕೆ
ಮಡಿಸಿ



*ಚಿತ್ರ 4.68*

Z ಆಕಾರದಂತೆ
3Δ ಗಳನ್ನು ಮಡಿಸಿ



*ಚಿತ್ರ 4.69*

ಮಡಿಸಿದ ಗೆರೆಯ ಗುಂಟ ಕತ್ತರಿಸಿ



*ಚಿತ್ರ 4.70*

ಮೇಲಿನ ತ್ರಿಕೋನವನ್ನು ಬಲಕ್ಕೆ ಮಡಿಸಿ.
ಕತ್ತರಿಸಿದ ಎಸಳನ್ನು ಎಡಕ್ಕೆ ಮಡಿಸಿ




*ಚಿತ್ರ 4.71*

ಉಳಿದ ತ್ರಿಕೋನವನ್ನು ಕತ್ತರಿಸಿ



*ಚಿತ್ರ 4.72*

ಕಾಗದ ಬಿಡಿಸಿ. ದ್ವಾದಶಭುಜಾಕೃತಿ ರೆಡಿ

# 5. ಕಾಗದವನ್ನು ವಿಭಾಗಿಸುವ ಬಗೆ

## ಒಂದು ಕಾಗದವನ್ನು ಸಮಭಾಗ ಮಾಡುವುದು

ಒರಿಗಾಮಿಯಲ್ಲಿ ಗಣಿತವನ್ನು ಕಾಣುವ ಪ್ರಕ್ರಿಯೆ ಶುರುವಾದಂತೆ, ಚೌಕ ಅಥವಾ ಆಯತಾಕೃತಿಗಳನ್ನು ಬೇಕಾದ ಸಂಖ್ಯೆಯಲ್ಲಿ ವಿಭಾಗ ಮಾಡುವತ್ತ ಗಮನ ಹರಿಯಿತು. ಇದು ಜಪಾನೀಯ ಸಾಂಪ್ರದಾಯಿಕ ಒರಿಗಾಮಿಯಲ್ಲಿಲ್ಲ. ಇಲ್ಲಿರುವ ಗಣಿತೀಯ ಅಂಶವೆಂದರೆ, ಒಂದು ಜ್ಯಾಮಿತೀಯ ಆಕೃತಿಯೊಳಗೆ ಸಂಪೂರ್ಣವಾಗಿ ತುಂಬಿಕೊಳ್ಳುವಂತೆ ಬೇರೊಂದು ಜ್ಯಾಮಿತೀಯ ಆಕೃತಿಗಳನ್ನು ಇರುಕಿಸುವುದು ಹೇಗೆ? ಇದಕ್ಕೆ Tessellation = ಶಬಲೀಕರಣ ಎನ್ನುತ್ತಾರೆ. ನಿತ್ಯ ಜೀವನದ ಉದಾಹರಣೆಯೆಂದರೆ ನೆಲದ ಅಳತೆಗೆ ಮೊಸಾಯಿಕ್ ಹಾಸುವುದು.

## ಒಂದು ಆಯತವನ್ನು ಮೂರು ಸಮಭಾಗ ಮಾಡುವುದು




*ಚಿತ್ರ 5.1*

ಒಂದು A4 ಗಾತ್ರದ ಆಯತ ತೆಗೆದುಕೊಳ್ಳಿ. A,B,C,D ಗುರ್ತಿಸಿ. AB ಯನ್ನು DC ಗೆ ತಂದು ಮಡಿಸಿ ಮೇಲೆತ್ತಿ




*ಚಿತ್ರ 5.2*

ಮಧ್ಯರೇಖೆಗೆ ತೆಗೆದುಕೊಳ್ಳಿ




*ಚಿತ್ರ 5.3*

B ಶೃಂಗವನ್ನು ಮಧ್ಯರೇಖೆಗೆ ಮುಟ್ಟಿಸಿ ಮಡಿಸಿ




*ಚಿತ್ರ 5.4*

ಆಗ ಮಡಚಿದ ರೇಖೆಯು P ಬಿಂದುವಿನಲ್ಲಿ ಛೇದಿಸುತ್ತದೆ. ಈ B ಯನ್ನು P ಗೆ ಮಡಿಸಿ




*ಚಿತ್ರ 5.5*

ಈ ಮಡಿಕೆಯು SQ ಗೆರೆಯನ್ನು ಮೂಡಿಸುತ್ತದೆ. ಮಡಚಿದ ಕಾಗದ ತೆರೆಯಿರಿ Q ಬಿಂದುವಿಗೆ DC ಯನ್ನು ಮಡಿಸಿ




*ಚಿತ್ರ 5.6*

R ಬಿಂದು ಮೂಡುತ್ತದೆ




*ಚಿತ್ರ 5.7*

AB ಯನ್ನು R ಬಿಂದುವಿಗೆ ತಾಗಿಸಿ ಮಡಿಸಿ. ಈಗ BQ=QR=RC




*ಚಿತ್ರ 5.8*

ABCD ಆಯತವು ಮೂರು ಸಮ ಭಾಗ ಆಗಿವೆ




*ಚಿತ್ರ 5.9*

QP ಯನ್ನು ಸೇರಿಸಿ

ಈ ರೀತಿಯಲ್ಲಿ ಮಡಿಸಿದಾಗ ಏನಾಗುತ್ತದೆ ? ಕಾಗದವು $^1/_3$ ಆಗಿ ವಿಭಾಗಗೊಳ್ಳುವುದೇಕೆ ? ಮೂರು ಸಮಭಾಗಗಳಾಗಿ ವಿಂಗಡಿಸಿದ ಆಯತದಲ್ಲಿನ ಎಲ್ಲ ರೇಖೆಗಳನ್ನೂ ಪೆನ್ಸಿಲ್ / ಪೆನ್‌ನಿಂದ ಗುರ್ತಿಸಿ.

ಇಲ್ಲಿರುವ $\Delta SBC$ ಮತ್ತು $\Delta PQC$ ಗಮನಿಸಿ ಇವೆರಡೂ ಸರ್ವಸಮ ತ್ರಿಭುಜಗಳು. ಇಲ್ಲಿ SBC=QPC ಏಕೆಂದರೆ $\hat{B}$ ಲಂಬಕೋನವನ್ನೇ ನಾವು Pಗೆ ತಂದು ಮಡಿಚಿದ್ದೇವೆ. $\hat{C}$ ಎರಡಕ್ಕೂ ಸಾಮಾನ್ಯ ಕೋನ. ಹಾಗಾಗಿ $P\hat{Q}C=B\hat{S}C$ ಆಗಿರುತ್ತದೆ. ಸರ್ವಸಮ ತ್ರಿಕೋನಗಳಾದ SBC ಮತ್ತು PQCಗಳ ಬಾಹುಗಳು ಒಂದೇ ಅನುಪಾತದಲ್ಲಿರುತ್ತವೆ.

$$\frac{SB}{PQ} = \frac{BC}{PC} = \frac{SC}{QC}$$

ಅಂದರೆ $BC = \frac{SC.PC}{QC} = \frac{(SP+PC) \times PC}{QC} = \frac{2.PC.PC}{QC} = \frac{2PC_2}{QC}$

PQCಯಲ್ಲಿ $QC^2=PQ^2+PC^2$ ಆಗಿರುತ್ತದೆ. BQ=PQ ಆಗಿದೆಯೆಂಬುದನ್ನು ನಾವು ಕಾಗದ ಮಡಿಸಿ ತಿಳಿದುಕೊಳ್ಳಬಹುದು. ಇವೆರಡೂ ಮೌಲ್ಯಗಳನ್ನು ಮೇಲಿನ ಸಮೀಕರಣದಲ್ಲಿ ಹಾಕಿದಾಗ

$$BC = \frac{2(QC^2-PQ^2)}{QC} = \frac{2(QC+PQ)(QC-PQ)}{QC} = \frac{2BC(QC-PQ)}{QC}$$

ಇಲ್ಲಿ ಗಮನಿಸಿ PQ=BQ (ಮಡಚಿ ನೋಡಿ)
ಅಲ್ಲದೆ QR=RC
ಹಾಗಾಗಿ $BQ=QR=RC=^1/_3 BC$

## ಕಾಗದವನ್ನು ಯಾವುದೇ ಸಂಖ್ಯೆಗೆ ವಿಭಾಗ ಮಾಡುವುದು




*ಚಿತ್ರ 5.10*

ಚೌಕ ಕಾಗದವೊಂದನ್ನು ತೆಗೆದುಕೊಳ್ಳಿ. DC ಯನ್ನು AB ಗೆ ಮಡಿಸಿ




*ಚಿತ್ರ 5.11*

ಮಧ್ಯಭಾಗಕ್ಕೆ ಚಿವುಟಿ




*ಚಿತ್ರ 5.12*

P ಬಿಂದುವನ್ನು ಬರೆಯಿರಿ




*ಚಿತ್ರ 5.13*

D ಬಿಂದುವನ್ನು P ಗೆ ಮಡಿಸಿ. ಮಧ್ಯ ಬಿಂದುವನ್ನು ಚಿವುಟಿ




*ಚಿತ್ರ 5.14*

Q ಬಿಂದುವನ್ನು ಗುರ್ತಿಸಿ. D ಯನ್ನು Q ಗೆ ಮಡಿಸಿ




*ಚಿತ್ರ 5.15*

QD ಯ ಮಧ್ಯಬಿಂದು R ಗುರ್ತಿಸಿ




*ಚಿತ್ರ 5.16*

Q ವನ್ನು P ಗೆ ಮಡಿಸಿ




*ಚಿತ್ರ 5.17*

S ಬಿಂದು ಗುರ್ತಿಸಿ




*ಚಿತ್ರ 5.18*

ಈಗ P,S, Q,R ಬಿಂದುಗಳು ADಯ ಮೇಲಿವೆ. ಇವುಗಳ ನಡುವಿನ ದೂರ ಸಮವಾಗಿದೆ




ಚಿತ್ರ 5.19

ಇದೇ ಬಗೆಯಲ್ಲಿ AD ಯ ಗುಂಟ ಎಂಟು ಸಮ ಭಾಗ ಮಾಡಿ. XY ಅನ್ನು 1ನೇ ಬಿಂದುವಿನಲ್ಲಿ DC ಗೆ ಸಮಾಂತರವಾಗಿ ಮಡಿಸಿ




ಚಿತ್ರ 5.20

5ನೇ ಬಿಂದು ಮತ್ತು C ಮೂಲೆಯನ್ನು ಸೇರಿಸಿ ಮಡಿಸಿದಾಗ




ಚಿತ್ರ 5.21

5C ಗೆರೆಯು XY ಅನ್ನು R ಬಿಂದುವಿನಲ್ಲಿ ಛೇದಿಸುತ್ತದೆ

$$RY = \frac{1}{5} DC$$




ಚಿತ್ರ 5.22

7ನೇ ಬಿಂದುವನ್ನು C ಗೆ ಜೋಡಿಸಿ ಮಡಿಸಿ

$$RY = \frac{1}{7} DC$$




ಚಿತ್ರ 5.23

6ನೇ ಬಿಂದು ಮತ್ತು C ಯನ್ನು ಸೇರಿಸಿದಾಗ

$$RY = \frac{1}{6} DC$$




ಚಿತ್ರ 5.24

4ನೇ ಬಿಂದು ಮತ್ತು C ಯನ್ನು ಮಡಿಸಿದಾಗ

$$RY = \frac{1}{4} DC$$

ಹೀಗೆಯೇ ಮುಂದುವರೆಸಬಹುದು




ಚಿತ್ರ 5.25




ಚಿತ್ರ 5.26

## ಕಾಗದವು ಹೀಗೇಕೆ ವಿಭಾಗವಾಗುತ್ತದೆ?

ABCD ಚೌಕವು 5 ಭಾಗಗಳಾಗಿದೆ ಎಂದಿಟ್ಟುಕೊಳ್ಳಿ. ಆಗ 5ನೇ ಬಿಂದು ಮತ್ತು 'C' ಮೂಲೆಯನ್ನು ಮಡಿಸಿರುತ್ತೇವೆ. ಇದು D5C ಮತ್ತು RYC ಉಂಟುಮಾಡುತ್ತದೆ. ಇವೆರಡೂ ಸಮರೂಪ ತ್ರಿಭುಜಗಳಾಗಿವೆ.

ಆದ್ದರಿಂದ $\frac{DC}{RY}=\frac{D5}{YC}=\frac{5}{1}$

$$\therefore RY=\frac{1}{5}DC$$



ಚಿತ್ರ 5.27

ಕೆಳಗೆ ಚೌಕವೊಂದನ್ನು 5 ಸಮಭಾಗಗಳನ್ನಾಗಿ ಮಾಡುವ ಹಂತಗಳನ್ನು ತೋರಿಸಲಾಗಿದೆ.



ಚಿತ್ರ 5.28



ಚಿತ್ರ 5.29



ಚಿತ್ರ 5.30



ಚಿತ್ರ 5.31



ಚಿತ್ರ 5.32

# 6. ಪೇಪರ್ ಟ್ರೇಗಳು ಮತ್ತು ಗಣಿತ

ಒಂದು ಕಾಗದಚೌಕದಲ್ಲಿ ಚಿಕ್ಕ ಚೌಕಗಳನ್ನು ತುಂಬಿಸುವ ಬಗೆ ನಮಗೆ ಈಗಾಗಲೇ ತಿಳಿದಿದೆ. ಹೀಗೆ 64 ಚೌಕಗಳನ್ನು ತುಂಬಿಸಿದ ದೊಡ್ಡ ಚೌಕವೊಂದನ್ನು ಮಡಿಸಿ ಅಥವಾ ಒಳಗಿನ ಚೌಕಗಳನ್ನು ಎಣಿಸಿ, ಕತ್ತರಿಸಿ, 32 ಘನ ಯೂನಿಟ್, 24 ಘನ ಯೂನಿಟ್, 8 ಘನ ಯೂನಿಟ್, 4 ಘನ ಯೂನಿಟ್ ಸಾಮರ್ಥ್ಯದ ಟ್ರೇಗಳನ್ನು ಮಡಚಿ ತಯಾರಿಸಬಹುದು.

ಈ ಕಾಗದದ ಟ್ರೇಗಳನ್ನು

ಎ) ಭಿನ್ನರಾಶಿಗಳು

ಬಿ) ಅನುಪಾತಗಳು

ಮುಂತಾದವನ್ನು ಪ್ರಾತ್ಯಕ್ಷೀಕರಿಸಲು ಬಳಸಿಕೊಳ್ಳಬಹುದು.

ಸೂಚನೆ : ಯಾವಾಗಲೂ 30 ಸೆಂ.ಮೀ x 30 ಸೆಂ.ಮೀ ಇರುವ ದೊಡ್ಡ ಕಾಗದವನ್ನೇ ಬಳಸಿ, ಮೂಲೆಗಳನ್ನು ಮಡಚುವಾಗ ಬೆರಳುಗಳಿಗೆ ಕಾಗದವನ್ನು ಹಿಡಿಯಲು ಅನುಕೂಲವಾಗುತ್ತದೆ.

ಈ ವಿವಿಧ ಗಾತ್ರಗಳ ಟ್ರೇಗಳಲ್ಲಿ ಸಕ್ಕರೆ ಅಥವಾ ಮರಳನ್ನು ತುಂಬಿಸಿ, ಅವುಗಳ ಸಾಮರ್ಥ್ಯಗಳ ತುಲನೆ ಮಾಡಬಹುದು.

4 ಘನ ಯೂನಿಟ್ 8 ಘನ ಯೂನಿಟ್ 16 ಘನ ಯೂನಿಟ್ 32 ಘನ ಯೂನಿಟ್

## 4 ಘನ ಯೂನಿಟ್ ಗಾತ್ರದ ಟ್ರೇ

30 ಸೆ.ಮೀ x 30 ಸೆಂ.ಮೀ ಇರುವ ದಪ್ಪನೆಯ (100gsm) ಕಾಗದ ತೆಗೆದುಕೊಳ್ಳಿ. ಇದನ್ನು ಮೂರು ಬಾರಿ ಅಡ್ಡಲಾಗಿ ಮತ್ತು ಅದನ್ನೇ ಉದ್ದವಾಗಿ ಮಡಿಸಿದರೆ ನಿಮಗೆ 64 ಸಣ್ಣ ಚೌಕಗಳು, ದೊಡ್ಡ ಚೌಕದಲ್ಲಿ ತುಂಬುತ್ತವೆ.



*ಚಿತ್ರ 6.1*

64 ಚೌಕಗಳು



*ಚಿತ್ರ 6.2*

ಇದರಲ್ಲಿ 4 x 4 ಇರುವಂತೆ ಕಾಗದವನ್ನು ಕತ್ತರಿಸಿ




*ಚಿತ್ರ 6.3*

ಕರ್ಣಗಳನ್ನು ಮಡಿಸಿ A, B, C, D ಬರೆಯಿರಿ




*ಚಿತ್ರ 6.4*

ಶೃಂಗಗಳನ್ನು ಚೂಪಾಗಿ ಮಡಿಸಿ




*ಚಿತ್ರ 6.5*

'B' ಶೃಂಗವನ್ನು
ಮಡಿಸಿದ ರೀತಿ



*ಚಿತ್ರ 6.6*

ಶೃಂಗ ತ್ರಿಕೋನವನ್ನು
ಅರ್ಧಿಸಿ ಮಡಿಸಿ



*ಚಿತ್ರ 6.7*

ಮಡಿಸಿದ ತ್ರಿಭುಜವನ್ನು
ಪಾರ್ಶ್ವಕ್ಕೆ ತಿರುಗಿಸಿ



*ಚಿತ್ರ 6.8*

ತ್ರಿಭುಜದ ಮಡಚನ್ನು ತೆರೆದು
ಬೆರಳಿನಲ್ಲಿ ತಳ್ಳಿದಾಗ ಅದು
ಚಪ್ಪಟೆಯಾಗುತ್ತದೆ



*ಚಿತ್ರ 6.9*

ಮೇಲೆದ್ದ ಸಣ್ಣ
ತ್ರಿಭುಜವನ್ನು ಒಳಗೆ
ಮಡಿಸಿ



*ಚಿತ್ರ 6.10*

ಈಗ ಮೂಲೆಯು
ಬಂಧಿತಗೊಳ್ಳುವುದು



*ಚಿತ್ರ 6.11*

ಎಲ್ಲ ಮೂಲೆಗಳಲ್ಲೂ
ಹೀಗೆಯೆ ಮಾಡಿ





*ಚಿತ್ರ 6.12*

2 x 2 ತಳವಿರುವಂತೆ ಒಂದು ಬಂಧಿತವಾಗುತ್ತದೆ.
ಯೂನಿಟ್ ಎತ್ತರದ 2 x 2 x1 = 4 ಯೂನಿಟ್
ಗಾತ್ರದ ಟ್ರೇ ಸಿದ್ಧವಾಗಿದೆ.

## 8 ಘನ ಯೂನಿಟ್‌ಗಳ ಟ್ರೇ – 4 x 8 ಚೌಕಗಳ ಕಾಗದದಿಂದ



*ಚಿತ್ರ 6.13*

ಹಿಂದಿನ ಮಾದರಿಯಲ್ಲಿ ಬಳಸಿದಂತೆ 8 x 8 ಚೌಕಗಳನ್ನು ಮಡಿಸಿದ 30 ಸೆಂ.ಮೀ ಕಾಗದವನ್ನು ತೆಗೆದುಕೊಳ್ಳಿ



*ಚಿತ್ರ 6.14*

ಅರ್ಧಕ್ಕೆ ಕತ್ತರಿಸಿ. ಒಂದು ಭಾಗ 4 x 8 ತೆಗೆದುಕೊಳ್ಳಿ




*ಚಿತ್ರ 6.15*

A, B, C, D ಗುರ್ತಿಸಿ




*ಚಿತ್ರ 6.16*

AB ಮತ್ತು DC ಗಳನ್ನು ಮಧ್ಯದ ಗೆರೆಗೆ ಮಡಿಸಿ




*ಚಿತ್ರ 6.17*

ಮೂಲೆಗಳನ್ನು ತ್ರಿಭುಜಾಕಾರದಲ್ಲಿ ಮಡಿಸಿ




*ಚಿತ್ರ 6.18*

A, B, D, C ಗಳಲ್ಲಿ ಮಡಚಿದ ತ್ರಿಭುಜಗಳನ್ನು ಸರಿಸಿ




*ಚಿತ್ರ 6.19*

ಮೂಲೆಗಳನ್ನು ಬೆರಳು ತೂರಿಸಿ ಮೇಲೆತ್ತಿ ಮಡಿಸಿ




*ಚಿತ್ರ 6.20*

2 x 4 ತಳವಿರುವ ಒಂದು ಯೂನಿಟ್ ಎತ್ತರವಿರುವ 2 x 4 x 1 = 8 ಘನ ಯೂನಿಟ್ ಗಾತ್ರದ ಟ್ರೇ ಸಿದ್ಧವಾಗಿದೆ

## 24 ಘನ ಯೂನಿಟ್‌ಗಳ ಟ್ರೇ – 8 x 8 ಚೌಕಗಳ ಕಾಗದದಿಂದ



*ಚಿತ್ರ 6.21*

30 ಸೆಂ.ಮೀ x 30 ಸೆಂ.ಮೀ ಇರುವ ಚೌಕದಲ್ಲಿ ಚಿಕ್ಕ ಚೌಕಗಳನ್ನು ಮಡಿಸಿ, ಇದರಲ್ಲಿ ಎಡ, ಬಲ, ಅಂಚುಗಳಿಂದ ಎರಡು ಚೌಕಗಳನ್ನು ಎಣಿಸಿ, ಮಧ್ಯದ ಗೆರೆಗೆ ಮಡಿಸಿ



*ಚಿತ್ರ 6.22*

ನಾಲ್ಕು ಅಂಚುಗಳಲ್ಲಿನ ಒಂದೊಂದು ಚೌಕವನ್ನು ಕರ್ಣದ ಗುಂಟ ಮಡಿಸಿ



*ಚಿತ್ರ 6.23*

ಅವು ಹೀಗಿರಬೇಕು



*ಚಿತ್ರ 6.24*

ಮಡಚಿದ ತ್ರಿಭುಜಗಳು ಮಧ್ಯದ ಕಾಗದದ ಎಸಳುಗಳನ್ನು ತ್ರಿಭುಜಗಳ ಮೇಲೆ ಹೊದೆಸಿ



*ಚಿತ್ರ 6.25*

ಅದು ಹೀಗೆ ಕಾಣುತ್ತದೆ. ಬಲ ಮೂಲೆಯನ್ನು ಮೇಲೆತ್ತಿ ಮಡಿಸಿ



*ಚಿತ್ರ 6.26*

ಬೆರಳನ್ನು ತೂರಿಸಿ ಮೂಲೆಯನ್ನು ಮೇಲೆತ್ತಿ ಮಡಿಸಬೇಕು



*ಚಿತ್ರ 6.27*

ನಾಲ್ಕೂ ಮೂಲೆಗಳಲ್ಲಿ ಮಡಿಸಿ ತಿರುಗಿಸಿ




*ಚಿತ್ರ 6.28*

6 x 4 ತಳದ ಒಂದು ಯೂನಿಟ್ ಎತ್ತರದ 6x4x1=24 ಘನ ಯೂನಿಟ್ ಗಾತ್ರದ ಟ್ರೇ ಸಿದ್ಧವಾಗುತ್ತದೆ

## 32 ಯೂನಿಟ್ ಗಾತ್ರದ ಟ್ರೇ – 8 X 8 ಚೌಕದ ಕಾಗದದಿಂದ

30 ಸೆಂ.ಮೀ x 30 ಸೆಂ.ಮೀ ಇರುವ ಕಾಗದದಲ್ಲಿ 8x8 ಚೌಕಗಳನ್ನು ಮಡಿಸಿ




*ಚಿತ್ರ 6.29*

A, B, C, D ಗುರ್ತಿಸಿ




*ಚಿತ್ರ 6.30*

ಕರ್ಣಗಳನ್ನು ಮಡಿಸಿ ಕೇಂದ್ರ ಭಾಗದಲ್ಲಿ 4 x 4 ಚೌಕ ವಿಂಗಡಿಸಿ




*ಚಿತ್ರ 6.31*

4x4 ತಳವಾಗಿರಲಿ. ಸುತ್ತಲಿನ ಕಾಗದವನ್ನು ಮೇಲೆತ್ತಿ




*ಚಿತ್ರ 6.32*

ಆಗ ನಾಲ್ಕು ಮೂಲೆಗಳಲ್ಲಿ ಅಂಚುಗಳು ಚಾಚುತ್ತವೆ




*ಚಿತ್ರ 6.33*

B ಶೃಂಗದ ತ್ರಿಕೋನವನ್ನು ಅರ್ಧಕ್ಕೆ ಮಡಿಸಿ



*ಚಿತ್ರ 6.34*

ಮಡಿಕೆಯನ್ನು ಬಿಡಿಸಿ ಅಗಲಮಾಡಿ



*ಚಿತ್ರ 6.35*

ಬೆರಳಿನಿಂದ ಒತ್ತಿ ಚಪ್ಪಟೆ ಮಾಡಿ



*ಚಿತ್ರ 6.36*

ಮೇಲೆದ್ದು ನಿಲ್ಲುವ ತ್ರಿಕೋನವನ್ನು ಒಳಗೆ ಮಡಿಸಿ



*ಚಿತ್ರ 6.37*

ತ್ರಿಕೋನವು ಒಳಗೆ / ಕೆಳಗೆ ಮಡಚುತ್ತದೆ



*ಚಿತ್ರ 6.38*

ಈಗ B ಮೂಲೆಯು ಬಂಧಿತವಾಗಿದೆ



ಎಲ್ಲ ಮೂಲೆಗಳನ್ನು ಹೀಗೆಯೇ ಬಂಧಿಸಿ





4x4 ತಳದ 2 ಯೂನಿಟ್ ಎತ್ತರದ 4x4x2=32ನ ಯೂನಿಟ್ ಗಾತ್ರದ ಟ್ರೇ ಸಿದ್ಧವಾಗುತ್ತದೆ

*ಚಿತ್ರ 6.39*

*ಚಿತ್ರ 6.40*

# 7. ಕಾಗದದಲ್ಲಿ ಸಣ್ಣ ಚೌಕ, ದೊಡ್ಡ ಚೌಕ

ಕಾಗದ ಮಡಚುತ್ತ ಅನೇಕ ಆಕೃತಿಗಳನ್ನು, ಮೂಡಿಸುವಂತೆಯೇ ಅಲಂಕಾರಿಕ ಮಡಿಕೆಗಳನ್ನು ಮಾಡಬಹುದು. ಸ್ಪೇನ್ ದೇಶದಲ್ಲಿ ಮೂರ್ಸ್ ಎಂಬ ಜನಾಂಗವಿದೆ. ಇವರು ಕುಶಲ ಕರ್ಮಿಗಳು. ಇಸ್ಲಾಂ ಧರ್ಮೀಯರು. ಹಾಗಾಗಿ ಮೂರ್ತಿ ಶಿಲ್ಪಗಳ ಕಡೆಗೆ ಇವರ ಆಸಕ್ತಿಯಿಲ್ಲ. ಆದರೆ ಜ್ಯಾಮಿತೀಯ ರಚನೆಗಳ ವಿನ್ಯಾಸದಲ್ಲಿ ಸಿದ್ಧಹಸ್ತರು. ಇವರು ಗಣಿತದಲ್ಲಿ ಜ್ಯಾಮಿತೀಯ ವಿನ್ಯಾಸಗಳನ್ನು ಸಾಧಿಸುವುದು ಕಾಗದ ಮಡಿಕೆಗಳ ಮೂಲಕ.

ಹೀಗೆ ಇವರು 'ಅಲ್ ಹಮ್ರಾ' ಅರಮನೆಯ ಗೋಡೆಗಳ ಮೇಲೆ ಬಿಡಿಸಿದ ವಿನ್ಯಾಸಗಳು ಜಗತ್ ಪ್ರಸಿದ್ಧ.

*          *          *

ಅಲ್ ಹಮ್ರಾದ ವಿನ್ಯಾಸಗಳು ಮಾರಿಟ್ಸ್ ಕಾರ್ನೆಲಿಸ್ ಎಷರ್ (1898–1972) ಎಂಬ ಗ್ರಾಫಿಕ್ ಕಲಾವಿದನಿಗೆ ಸ್ಫೂರ್ತಿ ನೀಡಿ ಅವನು ಮೊದಲ ಬಾರಿಗೆ ಗಣಿತೀಯ ಅಂಶಗಳನ್ನು ಮಾಡರ್ನ್‌ಕಲೆಯ ವ್ಯಾಪ್ತಿಗೆ ಹೊಂದಿಸಿದನು. ಎಷರ್‌ನ ಈ ಕೆಲವು ವಿನ್ಯಾಸಗಳನ್ನು ನೋಡಿ.







*ಚಿತ್ರ 7.1*



*ಚಿತ್ರ 7.2*



*ಚಿತ್ರ 7.3*

## ದೊಡ್ಡ ಚೌಕದಲ್ಲಿ 16 ಚಿಕ್ಕ ಚೌಕಗಳಾಗಿ ವಿಭಾಗಿಸುವುದು



*ಚಿತ್ರ 7.4*

20ಸೆಂ.ಮೀ. x 20 ಸೆಂ.ಮೀ. ಇರುವಂತೆ ಚೌಕ ಕಾಗದ ತೆಗೆದುಕೊಳ್ಳಿ



*ಚಿತ್ರ 7.5*

AD ಯನ್ನು BC ಗೆ ತಂದು ಮಡಿಸಿ



*ಚಿತ್ರ 7.6*

ಅರ್ಧಕ್ಕೆ ಮಡಿಸಿ



*ಚಿತ್ರ 7.7*

2 ಮಡಿಸಿದ ಕಾಗದ ತೆರೆದಾಗ



*ಚಿತ್ರ 7.8*

AB ಯನ್ನು DCಗೆ ಮಡಿಸಿ



*ಚಿತ್ರ 7.9*

ಅರ್ಧಕ್ಕೆ ಮಡಿಸಿ



*ಚಿತ್ರ 7.10*

ಇಲ್ಲಿ ಕಾಗದ ಬಿಡಿಸಿದಾಗ 4x4=16 ಚೌಕಗಳು ಕಾಣುತ್ತವೆ. ಒಂದು ಚೌಕವನ್ನು ಒಂದು ಯೂನಿಟ್ ಆಗಿ ಪರಿಗಣಿಸಿದಾಗ, ಈ ದೊಡ್ಡ ಚೌಕದ ವಿಸ್ತೀರ್ಣವನ್ನು 16 ಸಣ್ಣ ಚೌಕಗಳೆಂದು ನಿರ್ದೇಶಿಸಬಹುದು

## 9 ಚಿಕ್ಕ ಚೌಕಗಳಲ್ಲಿ ವಿನ್ಯಾಸಗಳು




*ಚಿತ್ರ 7.11*
ಹಿಂದೆ/ಮುಂದೆ ಎರಡು ಬಣ್ಣಗಳಿರುವ 20 ಸೆಂ.ಮೀ. x 20 ಸೆಂ.ಮೀ. ಚೌಕವನ್ನು ತೆಗೆದುಕೊಳ್ಳಿ. ಎರಡೂ ಬದಿಗಳಲ್ಲಿ ABCD ಬರೆಯಿರಿ




*ಚಿತ್ರ 7.12*
AE=EG=GB ಇರುವಂತೆ ಮಡಿಸಿ. ಇದಕ್ಕಾಗಿ ಸ್ಕೇಲಿನಿಂದ ಅಳೆಯಬೇಕಾಗಿಲ್ಲ




*ಚಿತ್ರ 7.13*
ಈ ಬಗೆಯಲ್ಲಿ ಅಡ್ಡಾದಿಡ್ಡಿಯಾಗಿ ಒಂದರ ಹಿಂದೊಂದು ಮಡಿಸಿ




*ಚಿತ್ರ 7.14*
ಈ ಬಗೆಯ 3 ಭಾಗಗಳು ಕಾಣುತ್ತವೆ. ಇದನ್ನೇ AB ಯನ್ನು CDಗೆ ಹೊಂದಿಸಿ 3 ಭಾಗ ಮಾಡಿ




*ಚಿತ್ರ 7.15*
ನಿಮಗೆ 3x3=9 ಇರುವ ಚೌಕಗಳು ಸಿಗುತ್ತದೆ. MNOP ಗುರ್ತಿಸಿ




*ಚಿತ್ರ 7.16*
MN, NP, PO, OM ಗಳನ್ನು ಮಡಿಸಿ




*ಚಿತ್ರ 7.17*
3 ಸಾರಿ ಮಡಿಚಿದ ನಂತರ ಹೀಗೆ ಮುಚ್ಚಿಕೊಳ್ಳುತ್ತದೆ



*ಚಿತ್ರ 7.18*
ಸಣ್ಣ ಚೌಕಗಳು ಹೀಗೆ ಒಂದು ವಿನ್ಯಾಸವಾಗಿ ಕಾಣುತ್ತದೆ. OM ಗಳನ್ನು ಮಡಿಸಿ

(ಸೂಚನೆ : ಇದೇ ಮಡಿಕೆಯ ವಿನ್ಯಾಸದಲ್ಲಿ ಪೈಥಾಗೊರಸ್ ಪ್ರಮೇಯ ಸಾಧನೆ ಸಾಧ್ಯವಿದೆ. ಮಾಡಿನೋಡಿ)

## ಒಂಬತ್ತು ಚೌಕಗಳ ಗಣಿತ

ಇದನ್ನು ಟೀ ಕಪ್ ಇಡುವ - ಟೀ ಕೋಸ್ಟರ್ ಆಗಿ ಬಳಸಬಹುದು. ಇದರಲ್ಲಿನ ಗಣಿತೀಯ ಅಂಶಗಳನ್ನು ತಿಳಿಯ ಬೇಕಾದರೆ ಮಾದರಿಯನ್ನು ಬಿಡಿಸಿ ನೋಡಿ. ಇಲ್ಲಿನ ಪ್ರಶ್ನೆಯೆಂದರೆ ಒಂಬತ್ತು ಚೌಕಗಳಲ್ಲಿ ಒಂದನ್ನು ಯೂನಿಟ್ ಚೌಕವಾಗಿ ಪರಿಗಣಿಸಿದರೆ, MNOP ಯ ವಿಸ್ತೀರ್ಣ ಎಷ್ಟು ?




*ಚಿತ್ರ 7.19*

EFGH=1 ಯೂನಿಟ್ ಚೌಕವಾಗಿರಲಿ. ಆಗ ದೊಡ್ಡ ಚೌಕವಾದ ABCD ಯ ವಿಸ್ತೀರ್ಣ = 9 ಯೂನಿಟ್ ಚೌಕಗಳು MN ರೇಖೆಯು MBNE ಆಯತದ ಕರ್ಣವಾಗಿದೆ. ಹಾಗಾಗಿ ಆಯತದ ವಿಸ್ತೀರ್ಣವನ್ನು ಅರ್ಧಿಸುತ್ತದೆ. ಆಯತದ ವಿಸ್ತೀರ್ಣವು 2 ಯೂನಿಟ್ ಚೌಕಗಳಾದ್ದರಿಂದ, ಇದರ ಅರ್ಧ = ಒಂದು ಯೂನಿಟ್ ಚೌಕವಾಗುತ್ತದೆ. ಅಂದರೆ MNOP ಯೊಳಗೆ EFGH ಅಲ್ಲದೆ 4 ಯೂನಿಟ್ ಚೌಕಗಳಿವೆ ಎಂದಾಯ್ತು. ಇದನ್ನೇ ಬರೆದಾಗ

MNOP=EFH+MEN+NFP+OGP+OHM+EFGH

= 5 ಯೂನಿಟ್ ಚೌಕಗಳು

## ಚಿಕ್ಕ ಚೌಕಗಳಲ್ಲಿ ವಿನ್ಯಾಸಗಳು – 2

20 ಸೆ.ಮೀ x 20 ಸೆ.ಮೀ ಇರುವ, ಒಮ್ಮುಖದಲ್ಲಿ ಬಣ್ಣವಿರುವ ಕಾಗದ ಚೌಕವನ್ನು ತೆಗೆದುಕೊಳ್ಳಿ.




*ಚಿತ್ರ 7.20*

ABCD ಗುರ್ತಿಸಿ.
A ಯನ್ನು C ಗೆ ತನ್ನಿ




*ಚಿತ್ರ 7.21*

ಮಡಿಕೆಯನ್ನು ತೆರೆಯಿರಿ




*ಚಿತ್ರ 7.22*

B ಯನ್ನು D ಗೆ ಮಡಿಸಿ,
ವಾಪಸ್ ತನ್ನಿ




*ಚಿತ್ರ 7.23*

A ಯನ್ನು ಕೇಂದ್ರಕ್ಕೆ ಮಡಿಸಿ




*ಚಿತ್ರ 7.24*

ಎಲ್ಲಾ ಶೃಂಗಗಳನ್ನು ಕೇಂದ್ರಕ್ಕೆ ಮಡಿಸಿ




*ಚಿತ್ರ 7.25*

ಚಿತ್ರದಲ್ಲಿ ಕಾಣಿಸಿದ ಚುಕ್ಕಿರೇಖೆಯ
ಗುಂಟ ಮಡಿಸಿ




*ಚಿತ್ರ 7.26*

ಮಡಿಸಿದುದರ ಹಿಂದಕ್ಕೆ
ತ್ರಿಭುಜಗಳು
ಕಾಣಿಸುವುವು




*ಚಿತ್ರ 7.27*

DB ಗಳನ್ನು ಗಮನಿಸಿ




*ಚಿತ್ರ 7.28*

DB ಗಳ ಹಾಗೆಯೇ ತನ್ನಿ.
ಆಗ ಕೇಂದ್ರದಿಂದ ಇನ್ನೆರಡು
ತ್ರಿಭುಜಗಳನ್ನು ಮಡಿಸಿ




*ಚಿತ್ರ 7.29*

ಇದೊಂದು ಸುಂದರ ವಿನ್ಯಾಸ.
ಇದನ್ನು ಸಹ ಟೀ ಕೋಸ್ಟರಿನಂತೆ
ಬಳಸಬಹುದು

ಈ ಟೀ ಕೋಸ್ಟರಿನ ವಿನ್ಯಾಸವನ್ನು ಗಮನಿಸಿ. ಇಲ್ಲಿಯೂ ಸಹ ದೊಡ್ಡ ಚೌಕವೊಂದರಲ್ಲಿ ಸಣ್ಣ ಚೌಕಗಳು ತುಂಬಿವೆ.



ಚಿತ್ರ 7.30

ಇದರಲ್ಲಿ ಎಷ್ಟು ಯೂನಿಟ್ ಚೌಕಗಳ ವಿಸ್ತೀರ್ಣವಿದೆ ?



ಚಿತ್ರ 7.31

ದೊಡ್ಡ ಚೌಕದೊಳಗೆ ನಾವು ಅಂಕಿಗಳನ್ನು ಬರೆದಿದ್ದೇವೆ. ಅವು 1 ರಿಂದ 24 ರವರೆಗೆ ಇವೆ. ಇವೆಲ್ಲ ಪೂರ್ಣ ಚೌಕಗಳು. ಆದರೆ ಉಳಿದ ತ್ರಿಭುಜಗಳನ್ನು ಸೇರಿಸಿದರೆ ಯೂನಿಟ್ ಚೌಕಗಳ ಲೆಕ್ಕದಲ್ಲಿ ವಿಸ್ತೀರ್ಣ ಎಷ್ಟು ?

## ಚಿಕ್ಕ ಚೌಕಗಳಲ್ಲಿ ವಿನ್ಯಾಸಗಳು – 3

A4 ಗಾತ್ರದ ಕಾಗದದಲ್ಲಿ ಚೌಕವೊಂದನ್ನು ಕತ್ತರಿಸಿಕೊಳ್ಳಿ. ಅದರಲ್ಲಿ 4 x 4 ಸಣ್ಣ ಚೌಕಗಳನ್ನು ಮಡಿಸಿ ಅದರಲ್ಲಿ ABCD, PQRS ಗುರುತಿಸಿ.




*ಚಿತ್ರ 7.32*

ABಯನ್ನು ಮಧ್ಯಗೆರೆಗೆ ಮಡಿಸಿ




*ಚಿತ್ರ 7.33*

ADಯನ್ನು ಮಧ್ಯಗೆರೆಗೆ ಮಡಿಸಿ




*ಚಿತ್ರ 7.34*

DCಯನ್ನು ಮಧ್ಯಗೆರೆಗೆ ಮಡಿಸಿ




*ಚಿತ್ರ 7.35*

BC ಯನ್ನು ಎಡಕ್ಕೆ ಮಡಿಸಿ



*ಚಿತ್ರ 7.36*

ಮೂಲೆಯ ಎಸಳನ್ನು ಹೊರಗೆ ಸೆಳೆದು




*ಚಿತ್ರ 7.37*

ಮಡಿಕೆಯನ್ನು ಒಳಗೆ ದೂಡಿ ಚೌಕ ಕೂಡಿಸಿ

ಈ ಕಾಗದ ಮಡಿಕೆಯ ವಿನ್ಯಾಸವನ್ನು 'ಪರ್ಸ್' ಎನ್ನುತ್ತಾರೆ. ಜಪಾನಿಯರು ಇದರಲ್ಲಿ ಚಿಕ್ಕ – ಪುಟ್ಟ ವಸ್ತುಗಳನ್ನು ಅಂದರೆ ಪಿನ್‌ಗಳು, ಸೂಜಿಗಳು, ಬಟನ್‌ಗಳನ್ನು ಇಟ್ಟುಕೊಳ್ಳುತ್ತಾರೆ. ಇದನ್ನೇ ಒಂದಿಷ್ಟು ಮಾರ್ಪಾಡು ಮಾಡಿ ಟೀ ಕೋಸ್ಟರಿನ ಇನ್ನೊಂದು ವಿನ್ಯಾಸವನ್ನು ಪಡೆಯಬಹುದು.

## 64 ಚಿಕ್ಕ ಚೌಕಗಳನ್ನು ದೊಡ್ಡ ಚೌಕದಲ್ಲಿ ತುಂಬಿಸುವುದು – 4

20 ಸೆಂ.ಮೀ. x 20 ಸೆಂ.ಮೀ. ಇರುವ ಕಾಗದದ ಚೌಕವೊಂದನ್ನು ತೆಗೆದುಕೊಳ್ಳಿ. ABCD ಬರೆಯಿರಿ.




*ಚಿತ್ರ 7.38*

ADಯನ್ನು BC ಗೆ ತಂದು ಮಡಿಸಿ




*ಚಿತ್ರ 7.39*

E, F ಗುರ್ತಿಸಿ




*ಚಿತ್ರ 7.40*

ಮತ್ತೊಮ್ಮೆ ಅರ್ಧಕ್ಕೆ ಮಡಿಸಿ






*ಚಿತ್ರ 7.41*

ಅದು ಹೀಗಾಗುತ್ತದೆ ಇದನ್ನು




*ಚಿತ್ರ 7.42*

ಉದ್ದನೆಯ 8 ಕಂಬ ಸಾಲುಗಳು ಕಾಣುತ್ತವೆ




*ಚಿತ್ರ 7.43*

ಇದೇ ಕಾಗದವನ್ನು ಅಡ್ಡಲಾಗಿ 3 ಬಾರಿ ಮಡಚಿ ತೆರೆದರೆ ನಿಮಗೆ 64 ಚೌಕಗಳುಳ್ಳ ದೊಡ್ಡದೊಂದು ಚೌಕವು ದೊರೆಯುತ್ತದೆ

ಈ 64 ಚೌಕಗಳ ವಿನ್ಯಾಸದಲ್ಲಿ ಶಾಲಾಪಠ್ಯದ ಅತಿಹೆಚ್ಚು ಗಣಿತ ಮಾದರಿಗಳನ್ನು ಮಾಡಬಹುದು.

# 8. ವಿವಿಧ ಜ್ಯಾಮಿತೀಯ ಆಕೃತಿಗಳಿಂದ ಒರಿಗಾಮಿ ಮಾದರಿಗಳು

ಸಾಮಾನ್ಯವಾಗಿ ಒರಿಗಾಮಿ ಮಾದರಿಗಳೆಲ್ಲ ಚೌಕಾಕಾರದ ಕಾಗದದಿಂದಲೇ ಮಾಡಿದವೆಂಬ ಹೇಳಿಕೆಯಿದೆ. ಇದು ಅಮೆರಿಕದಲ್ಲಿ ಹಬ್ಬಿದ ಕಥೆ. ಜಪಾನಿನಲ್ಲೂ ಸಹ ವಿವಿಧ ಆಕೃತಿಗಳಿಂದ ಮಾಡಿದ ಮಾದರಿಗಳಿವೆ. ಇಂದು ಜಾಗತಿಕವಾಗಿ ಚೌಕಾಕಾರದಿಂದಲೇ ಮಾಡಬೇಕೆಂಬ ನಿಯಮವನ್ನು ಯಾರೂ ಪಾಲಿಸುವುದಿಲ್ಲ. ಒರಿಗಾಮಿಯ ಮಾದರಿಗಳ ಮೂಲಕ ಗಣಿತೀಯ ಅಂಶಗಳನ್ನು ಸರಳಗೊಳಿಸುವತ್ತ ಈ ಪುಸ್ತಕದ ಉದ್ದೇಶವಿದೆ. ಆದ್ದರಿಂದ ಶಾಲೆಯಲ್ಲಿ ಬಳಸುವ ವಿವಿಧ ಜ್ಯಾಮಿತೀಯ ಆಕೃತಿಗಳಿಂದ ಮಾಡಬಹುದಾದ ಒರಿಗಾಮಿ ಮಾದರಿಗಳನ್ನು ನೀಡಲಾಗಿದೆ. ಶಾಲಾ ವಾತಾವರಣದಲ್ಲಿ ಜ್ಯಾಮಿತೀಯ ಆಕೃತಿಗಳನ್ನು ಹೋಲಿಸುವುದರಿಂದ ವಿದ್ಯಾರ್ಥಿಗಳಲ್ಲಿ ಜ್ಯಾಮಿತೀಯ ಬಳಕೆ ಹೆಚ್ಚುತ್ತದೆ.

## ಸಮದ್ವಿಬಾಹು ತ್ರಿಭುಜದಿಂದ ಆನೆ




*ಚಿತ್ರ 8.1*

ಉದ್ದಕ್ಕೂ ಮಡಿಸಿದ
ಆಯತಾಕಾರದ ಕಾಗದದಿಂದ




*ಚಿತ್ರ 8.2*

ಕರ್ಣಗಳ ಗುಂಟ ಕತ್ತರಿಸಿ




*ಚಿತ್ರ 8.3*

ಪಾರ್ಶ್ವದಲ್ಲಿ ಲಂಬಕೋನ
ತ್ರಿಭುಜವನ್ನು ಮಡಿಸಿ




*ಚಿತ್ರ 8.4*

ತೆರೆಯಿರಿ




*ಚಿತ್ರ 8.5*

ಒಳಗೆ ತಳ್ಳಿ




*ಚಿತ್ರ 8.6*

C, D ಗಳನ್ನು ಕೆಳಗೆ ಮಡಿಸಿ




*ಚಿತ್ರ 8.7*

ಒಳಗೆ ತಳ್ಳಿ



*ಚಿತ್ರ 8.8*

ಇದು ಆನೆಯ ತಲೆ



*ಚಿತ್ರ 8.9*

ಆನೆ

## ಚೌಕದಿಂದ ವಿಮಾನ




*ಚಿತ್ರ 8.10*

ಚೌಕವನ್ನು ತೆಗೆದುಕೊಳ್ಳಿ




*ಚಿತ್ರ 8.11*

ಮಧ್ಯಕ್ಕೆ ಮಡಿಸಿ




*ಚಿತ್ರ 8.12*

A, B ಗಳನ್ನು ಮಧ್ಯಗೆರೆಗೆ ತನ್ನಿ




*ಚಿತ್ರ 8.13*

ಶೃಂಗವನ್ನು ಕೆಳಗೆ ತನ್ನಿ




*ಚಿತ್ರ 8.14*

ಪಾರ್ಶ್ವ ಅಂಚುಗಳನ್ನು ಮಧ್ಯಕ್ಕೆ ತನ್ನಿ




*ಚಿತ್ರ 8.15*

D ಯನ್ನು C ಗೆ ಮಡಿಸಿ




*ಚಿತ್ರ 8.16*

ಹಿಂದಕ್ಕೆ ತಿರುಗಿಸಿ




*ಚಿತ್ರ 8.17*

ಒಂದು ಇಂಚಿನಷ್ಟು ಎತ್ತರದಲ್ಲಿ ಮಡಿಸಿ




*ಚಿತ್ರ 8.18*

ರೆಕ್ಕೆಗಳನ್ನು ಬಿಡಿಸಿ




*ಚಿತ್ರ 8.19*

ರೆಕ್ಕೆಗಳ ಅಂಚುಗಳನ್ನು ಮೇಲೆತ್ತಿ

ಈ ವಿಮಾನವು ಬಹಳ ಚೆನ್ನಾಗಿ ಹಾರುತ್ತದೆ. ಮುಂಚಾಚಿದ ಎರಡು ಬೆರಳುಗಳಲ್ಲಿ ಮಾದರಿಯನ್ನು ಹಿಡಿದು ನೇರ ರೇಖೆಯಲ್ಲಿ ಎಸೆಯಿರಿ. ವಿಮಾನವು ನೇರವಾಗಿ ಹಾರುತ್ತದೆ.



*ಚಿತ್ರ 8.20*

ವಿಮಾನ

## ಸಮಕೋನ ತ್ರಿಭುಜದಿಂದ ಸ್ಟಾರ್ ಆಫ್ ಡೇವಿಡ್

ಒಂದು ಸಮಬಾಹು ತ್ರಿಭುಜದಿಂದ ಶುರುಮಾಡಿ




*ಚಿತ್ರ 8.21*

A, B, C ಗಳನ್ನು ಗುರ್ತಿಸಿ
A ಯನ್ನು ತಳಕ್ಕೆ ಮಡಿಸಿ




*ಚಿತ್ರ 8.22*

A ಯನ್ನು ಮೇಲಕ್ಕೆ ಮಡಿಸಿ




*ಚಿತ್ರ 8.23*

C ಯನ್ನು ಮತ್ತೆ A ಗೆ ಮಡಿಸಿ




*ಚಿತ್ರ 8.24*

C ಯನ್ನು ವಾಪಸ್ ಮಡಿಸಿ




*ಚಿತ್ರ 8.25*

B ಯನ್ನು AC ಅಂಚಿಗೆ
ಮಡಿಸಿ




*ಚಿತ್ರ 8.26*

B ಯನ್ನು ಮತ್ತೆ
ಹಿಂದಕ್ಕೆ ಮಡಿಸಿ




*ಚಿತ್ರ 8.27*

B ಯನ್ನು C ಯ
ಅಡಿಗೆ ಸಿಕ್ಕಿಸಿ




*ಚಿತ್ರ 8.28*

ಇದು ಸ್ಟಾರ್ ಆಫ್ ಡೇವಿಡ್



*ಚಿತ್ರ 8.29*

ಇಂತಹ ಮಾದರಿಗಳಿಂದ ರಚಿತವಾದ
ಮೊಬೈಲ್ ಶಿಲ್ಪ ಸ್ಟಾರ್ ಆಫ್
ಡೇವಿಡ್ ಜೊತೆಗೆ (ಚಲನಶೀಲ)

## ಲಂಬಕೋನ ತ್ರಿಭುಜದಿಂದ – ಮೀಂಚುಳ್ಳಿ

ಒಂದು ಚೌಕದಿಂದ ಲಂಬಕೋನ ತ್ರಿಭುಜವನ್ನು ಕತ್ತರಿಸಿಕೊಳ್ಳಿ.



***ಚಿತ್ರ 8.30***

ಲಂಬಕೋನ ತ್ರಿಭುಜ




***ಚಿತ್ರ 8.31***

B ಮತ್ತು C ಶೃಂಗಗಳನ್ನು A ಗೆ ಮಡಿಸಿ




***ಚಿತ್ರ 8.32***

B, C ಗಳು ವಾಪಸ್ ಬರಲಿ




***ಚಿತ್ರ 8.33***

AC = AB ADಗೆ ಮಡಿಸಿ ಮಾದರಿಯನ್ನು ಹಿಂದೆ ತಿರುಗಿಸಿದೆ




***ಚಿತ್ರ 8.34***

ಅದು ಹೀಗೆ ಕಾಣುತ್ತದೆ




***ಚಿತ್ರ 8.35***

C ಯಿಂದ Iಗೆ ಮಡಿಸಿ. FGHಗಳನ್ನು ICಯಗುಂಟ ಜೋಡಿಸಿ ಮಡಿಸಿ




***ಚಿತ್ರ 8.36***

ಆಗ FCHಎದ್ದು ನಿಲ್ಲುತ್ತದೆ




***ಚಿತ್ರ 8.37***

ಬಲ ಬದಿಯಲ್ಲಿ ಇದೇ ರೀತಿ ಮಡಿಸಿ



***ಚಿತ್ರ 8.38***

ಮಾದರಿಯನ್ನು ಹಿಂದಕ್ಕೆ ತಿರುಗಿಸಿ



***ಚಿತ್ರ 8.39***

ಮಧ್ಯರೇಖೆಯ ಗುಂಟ ಮಡಿಸಿ



***ಚಿತ್ರ 8.40***

ಅದು ಹೀಗೆ ಕಾಣುತ್ತದೆ



***ಚಿತ್ರ 8.41***

ಪಾರ್ಶ್ವದ ರೆಕ್ಕೆಗಳನ್ನು ಮಡಿಸಿ



***ಚಿತ್ರ 8.42***

ರೆಕ್ಕೆಗಳನ್ನು ಮೇಲಕ್ಕೆ ಮಡಿಸಿ



***ಚಿತ್ರ 8.43***

ಮೀಂಚುಳ್ಳಿ

## ತ್ರಾಪಿಜ್ಯದಿಂದ ಇನ್ನೊಂದು ಬಗೆಯ ವಿಮಾನ




*ಚಿತ್ರ 8.44*

A4 ಕಾಗದದಿಂದ ಶುರು
ಮಾಡಿ ಮಧ್ಯರೇಖೆ ಮಡಿಸಿ




*ಚಿತ್ರ 8.45*

ಎಡ, ಬಲ ಮಡಚುಗಳಿಂದ
2 ಸೆಂ.ಮೀ. ಅಳೆದು A B ಗುರ್ತಿಸಿ.
ABCD ಒಂದು ತ್ರಾಪಿಜ್ಯ




*ಚಿತ್ರ 8.46*

AC, BD ಗಳನ್ನು ಮಡಿಸಿ




*ಚಿತ್ರ 8.47*

AB ಅಂಚನ್ನು
ಮಧ್ಯಕ್ಕೆ ಮಡಿಸಿ




*ಚಿತ್ರ 8.48*

ಮೇಲಿನ ಅಂಚನ್ನು
ಮತ್ತೆ ಮಡಿಸಿ




*ಚಿತ್ರ 8.49*

C ಯನ್ನು D ಗೆ
ಮಡಿಸಿ




*ಚಿತ್ರ 8.50*

ಎಡಭಾಗದಿಂದ 2 ಸೆ.ಮೀ.
ಅಳೆದು CD ಗಳನ್ನು ಎಳೆಯಿರಿ



*ಚಿತ್ರ 8.51*

ಹೀಗಿರುತ್ತದೆ



*ಚಿತ್ರ 8.52*

ಈ ವಿಮಾನವು ಚೆನ್ನಾಗಿ
ಹಾರುತ್ತದೆ

## ವೃತ್ತದಿಂದ ಷಡ್ಭುಜ ಬೋಗುಣಿ

ಸಾಮಾನ್ಯವಾಗಿ ವೃತ್ತವನ್ನು ಬಳಸಿಕೊಂಡು ರಚಿಸಿದ ಒರಿಗಾಮಿ ಮಾದರಿಗಳನ್ನು ಯಾರೂ ನೋಡಿರುವುದಿಲ್ಲ. ಆದರೆ ಗಣಿತೀಯ ಅಂಶಗಳನ್ನು ಒಳಗೊಂಡ ಎರಡು ಮಾದರಿಗಳನ್ನು ಇಲ್ಲಿ ನೀಡಿದ್ದೇವೆ. ವೃತ್ತವನ್ನು ಪಡೆಯಲು ಒಂದು ಚೌಕವನ್ನು ಪುಟ 21ರಲ್ಲಿ ತೋರಿಸಿದಂತೆ ಮಡಿಸಿ ಕತ್ತರಿಸಿ.



***ಚಿತ್ರ 8.53***

ಮಡಿಸುವಾಗ ಎಚ್ಚರವಿರಲಿ ಅರ್ಧಕ್ಕೆ ಮಡಿಸಿ



***ಚಿತ್ರ 8.54***

ಎಡದಿಂದ ಬಲಕ್ಕೆ ಮಡಿಸಿ



***ಚಿತ್ರ 8.55***

ಕೇಂದ್ರಕ್ಕೆ ಅರ್ಧಕ್ಕೆ ಮಡಿಸಿ



***ಚಿತ್ರ 8.56***

ಮೇಲಿನ ಅಂಚನ್ನು ಕೆಳಗಿನ ಖಂಡವನ್ನು ಮಡಿಸಿ



***ಚಿತ್ರ 8.57***

ಅದು ಹೀಗೆ ಕಾಣುತ್ತದೆ




***ಚಿತ್ರ 8.58***

1 ರಿಂದ 8 ರವರೆಗೆ ಅಂಕಿಗಳನ್ನು ಬರೆಯಿರಿ. ಒಳಗಿನ ಮತ್ತು ಹೊರಗಿನ ಅಷ್ಟಭುಜವನ್ನು ಗಮನಿಸಿ




***ಚಿತ್ರ 8.59***

7,8 ಗಳನ್ನು ಅಭಿಮುಖವಾಗಿಟ್ಟು ಮಡಿಸಿ. ಇದನ್ನು 6ರ ಕೆಳಗೆ ತಳ್ಳಿ




***ಚಿತ್ರ 8.60***

ಅಷ್ಟಭುಜದ ಅಂಚುಗಳನ್ನು ಹಿಂಬದಿಗೆ ಮಡಿಸಿ




***ಚಿತ್ರ 8.61***

ಬೋಗುಣಿಯು ಹೀಗೆ ಕಾಣುತ್ತದೆ. ಕೆಳಗಿನ ಅಷ್ಟಭುಜವನ್ನು ಬೆರಳಿನಿಂದ ಮೇಲಕ್ಕೆ ತಳ್ಳಿ



***ಚಿತ್ರ 8.62***

ಈಗ ಷಡ್ಭುಜ ಬೋಗುಣಿ ಆಗುತ್ತದೆ

## ವೃತ್ತದಿಂದ ಹಣತೆಯಲ್ಲಿನ ದೀಪ

ಒಂದು ಬದಿಯಲ್ಲಿ ಹಳದಿ ಬಣ್ಣವಿದ್ದು, ಇನ್ನೊಂದೆಡೆ ಕಪ್ಪು ಬಣ್ಣವಿರುವ ಕಾಗದದಲ್ಲಿ ವೃತ್ತವನ್ನು ಕತ್ತರಿಸಿಕೊಳ್ಳಿ.



***ಚಿತ್ರ 8.63***
ವೃತ್ತವನ್ನು ಅರ್ಧಕ್ಕೆ ಮಡಿಸಿ



***ಚಿತ್ರ 8.64***
ಬಲದಿಂದ ಮಡಿಸಿ



***ಚಿತ್ರ 8.65***
$^{1}/_{3}$ರಷ್ಟು ಮಡಿಸಿ



***ಚಿತ್ರ 8.66***
ವೃತ್ತವನ್ನು ಬಿಡಿಸಿ. ಈಗ ವೃತ್ತವು 3 ಭಾಗಗಳಾಗಿರುವುದನ್ನು ಗಮನಿಸಿ



***ಚಿತ್ರ 8.67***
ಎರಡು ಭಾಗಗಳನ್ನು ಕೇಂದ್ರಕ್ಕೆ ಒತ್ತಿ ಮಡಿಸಿ. ಕೇಂದ್ರದಿಂದ ಬೆರಳುಗಳಲ್ಲಿ ಅಂಚಿನವರೆಗೆ ಒತ್ತಿ



***ಚಿತ್ರ 8.68***
ಎಡಬಲಗಳ ಅಂಚನ್ನು ಮೇಲಕ್ಕೆ ಮಡಿಸಿ



***ಚಿತ್ರ 8.69***
ಹಣತೆಯಲ್ಲಿನ ದೀಪ

# 9. ಕಾಗದ ಮಡಿಕೆಗಳಲ್ಲಿ ಕೋನಗಳು

ಅತಿ ದೊಡ್ಡ ಕಟ್ಟಡಗಳನ್ನು, ಪಿರಮಿಡ್‌ಗಳನ್ನು ಕಟ್ಟಿದ ಈಜಿಪ್ಟ್ ಸಂಸ್ಕೃತಿಯಲ್ಲಿ ಕೋನ ಮಾಪಕವು ಇರಲಿಲ್ಲವೆಂದರೆ ಆಶ್ಚರ್ಯವಾಗುತ್ತದಲ್ಲವೇ? ಇಂದು ಕೋನ ಮಾಪಕವನ್ನು ನಾವು ಶಾಲೆಯ ಜ್ಯಾಮಿತಿ ಬಾಕ್ಸ್‌ನಲ್ಲಿ ಕೊಂಡೊಯ್ಯುತ್ತೇವೆ. ಆದರೆ ಹಿಂದಿನ ಈಜಿಪ್ಟ್‌ನವರಿಗೆ ಕೋನಗಳ ಕಲ್ಪನೆಯೇ ಇರಲಿಲ್ಲ. ವರ್ಷಕ್ಕೆ 360 ದಿನಗಳಿವೆ ಎಂದು ಅಂದಾಜಾಗಿ ಗುರುತಿಸಿಕೊಂಡ ಕಾಲದಲ್ಲಿಯೇ ವೃತ್ತವನ್ನು 360 ಭಾಗ ಮಾಡಲಾಯಿತು ಎಂದು ಕೆಲವರ ಅಭಿಪ್ರಾಯ. ಕೆಲವು ಮೆಗಾಲಿಥ್ ರಚನೆಗಳಿಂದ ಈ ಅಂಶವನ್ನು ಗುರುತಿಸಲಾಗಿದೆ. ಬ್ಯಾಬಿಲೋನಿಯದಲ್ಲಿ ವೃತ್ತವೊಂದನ್ನು 360 ಭಾಗ ಮಾಡಿದಾಗ, ನಾವು ಇಂದು ಕಾಣುವ ಕೋನಮಾಪಕವು ಗಣಿತಕ್ಕೆ ಬಂದಿತು. ಒರಿಗಾಮಿ ಮಾದರಿಗಳಲ್ಲಿನ ಜ್ಯಾಮಿತೀಯ ಕೋನಗಳು ನಮಗೆ ಬೇಗ ಗಮನಕ್ಕೆ ಬರುವುದಿಲ್ಲ.

ಪುರಾತನ ಈಜಿಪ್ಟ್‌ನಲ್ಲಿ $90^0$ (ಲಂಬಕೋನ) ಪಡೆಯಲು ಎಷ್ಟು ಸಾಹಸ ಪಡುತ್ತಿದ್ದರೆಂಬುದನ್ನು ತಿಳಿಯುವುದು ಕುತೂಹಲ ಹುಟ್ಟಿಸುತ್ತದೆ. ಅವರು ದೊಡ್ಡದೊಂದು ಹಗ್ಗವನ್ನು ತೆಗೆದುಕೊಂಡು, ಅದರಲ್ಲಿ ಸಮಾನದೂರದಲ್ಲಿ 12 ಗಂಟುಗಳನ್ನು ಹಾಕುತ್ತಿದ್ದರು. ಒಂದೆಡೆ 3 ಗಂಟುಗಳು, ಮತ್ತೊಂದೆಡೆ 4 ಗಂಟುಗಳೂ ಇರುವಂತೆ, ಒಂದು ಗೂಟಕ್ಕೆ ದಾರ ಸಿಕ್ಕಿಸಿ, ಇಬ್ಬರು ವ್ಯಕ್ತಿಗಳು ದಾರವನ್ನು ಎಳೆದು ಹಿಡಿಯುತ್ತಿದ್ದರು. ಆಗ ಚಿತ್ರದಲ್ಲಿ ತೋರಿಸಿದಂತೆ ಲಂಬಕೋನ ಉಂಟಾಗುತ್ತಿತ್ತು.

- ಒರಿಗಾಮಿ ಮಾದರಿಗಳಲ್ಲಿ ಕೋನಗಳು
- ಕಾಗದ ಮಡಿಕೆಯ ಮೂಲಕ ಕೋನವನ್ನು ಅರ್ಧಿಸುವುದು
- ಕಾಗದ ಮಡಿಕೆಯ ಮೂಲಕ ಕೋನವನ್ನು ಮೂರುಭಾಗ ಮಾಡುವುದು

ವಿವಿಧ ಜ್ಯಾಮಿತೀಯ ಆಕೃತಿಗಳಲ್ಲಿ ಒಳಕೋನಗಳನ್ನು ಅರಿತಾಗ, ಒರಿಗಾಮಿ ಆಕೃತಿಗಳಲ್ಲಿನ ಕೋನಗಳನ್ನು ತಿಳಿಯಲು ಸಾಧ್ಯ. ಆದ್ದರಿಂದ ಕೆಲವು ಪರಿಚಿತ ಆಕೃತಿಗಳಲ್ಲಿನ ಕೋನಗಳನ್ನು ಅರಿತುಕೊಳ್ಳೋಣ.



*ಚಿತ್ರ 9.1*




*ಚಿತ್ರ 9.2*

